# ಅಧ್ಯಾತ್ಮಪ್ರಕಾಶ

ಸಂಸ್ಥಾಪಕರು : ಪ. ಪ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು

‘ एतज्ज्ञेयं नित्यमेवाऽऽत्मसंस्थं नातः परं वेदितव्यं हि किञ्चित् ’

**ಸಂಪುಟ ೫೬** ಅಕ್ಟೋಬರ್ ೧೯೮೬ **ಸಂಚಿಕೆ ೨**

ವಿಷಯಗಳು



ಪತ್ರಿಕೆಯ ಚಂದಾ

**ವರ್ಷಕ್ಕೆ**

ರೂ. ೧೫-೦೦

**ಪೋಷಕರಿಗೆ ರೂ. ೨೦-೦೦**

**ಮಹಾಪೋಷಕರಿಗೆ ರೂ. ೧೫೧-೦೦**

**ಹೊಸ ಸಂಪುಟಕ್ಕೆ ಚಂದಾಹಣವನ್ನು ಈಗಲೆ ಕಳುಹಿಸಿರಿ.**

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ:

**ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,**

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

October-1986

# ಕಾರ್ಯಾಲಯದ ಸುದ್ದಿ

**ಪತ್ರಿಕೆ :** ಈವರೆಗೆ (20-9-86) ೪೧೨ ಚಂದಾದಾರರುಗಳು ಚಂದಾಹಣ ಪೋಷಣದ್ರವ್ಯಗಳನ್ನು ಕಳುಹಿಸಿದ್ದಾರೆ. ಪತ್ರಿಕೆಯ ಸಂಚಿಕೆಗಳು ನಿಯಮಿತ ಸಂಖ್ಯೆಯಲ್ಲಿ ಮುದ್ರಿತವಾಗುತ್ತಿರುವದರಿಂದ ಇಷ್ಟವುಳ್ಳವರು ಕೂಡಲೆ ಚಂದಾದಾರರಾಗಬೇಕಾಗಿ ಪ್ರಾರ್ಥನೆ. ಈವರೆಗೆ ಮಹಾಪೋಷಕರ ಸಂಖ್ಯೆ ೯೩೭ನ್ನು ತಲುಪಿದೆ. ಇದು ಒಂದು ಸಾವಿರಕ್ಕೆ ತಲುಪುವಂತೆ ಸಹಕರಿಸಿ ಪ್ರೋತ್ಸಾಹಿಸಬೇಕಾಗಿ ಬೇಡಿದೆ.

**ಸ್ವತಂತ್ರಪುಟಗಳು : 'ಮಹಾನಾರಾಯಣೋಪನಿಷತ್ತು'** (ಕನ್ನಡ ವಿವರಣೆಸಹಿತ) ಎಂಬ ಗ್ರಂಥವನ್ನು ಎಂಟು ಪುಟಗಳಂತೆ ಕೊಡಲಾರಂಭಿಸಿದೆ. ಇದು ಎಂದಿನಂತೆ ಮುಂದುವರೆಯುತ್ತದೆ. **'ಅಧ್ಯಾತ್ಮಶಂಕರವಿಜಯ'**ದ ಪ್ರಕಟನೆಯನ್ನು ಅರ್ಧಕ್ಕೇ ನಿಲ್ಲಿಸಿದ ಬಗ್ಗೆ ಮತ್ತೆ ಕೆಲವರಿಗೆ ಅಸಮಾಧಾನವಾಗಿದೆ. ಆದ್ದರಿಂದ ಆ ಗ್ರಂಥವನ್ನು ಪೂರೈಸಿ ಸ್ವತಂತ್ರವಾಗಿಯೇ ಹೊರತರುವಂತೆ ಗ್ರಂಥಕರ್ತರನ್ನು ಕೇಳಿಕೊಳ್ಳಲಾಗಿದೆ. ವಿವರಗಳನ್ನು ಹಿಂದಿನಿಂದ ತಿಳಿಸುವೆವು.

**ಅನುಷ್ಠಾನ :** ಇದೇ ಅಕ್ಷಯನಾಮ ಸಂವತ್ಸರದ ಆಶ್ವಯುಜ ಶುಕ್ಲ ಪ್ರತಿಪತ್ (ತಾ॥ 4-10-1986) ಶನಿವಾರದಿಂದ ಒಂಭತ್ತು ದಿನಗಳ ಕಾಲ **ಹೊಳೆನರಸೀಪುರದ ಕಾರ್ಯಾಲಯದಲ್ಲಿ** ಶರನ್ನವರಾತ್ರಿ ಉತ್ಸವದ ಪ್ರಯುಕ್ತ ಬೆಳಗ್ಗೆ ವಿಶೇಷಪೂಜಾದಿಗಳೂ ಸಂಜೆ 5 ಘಂಟೆಯಿಂದ **ಭಾಗವತಪ್ರವಚನ**ವೂ ನಡೆಯುತ್ತದೆ. ತಾ॥ 12-10-86ನೇ ಭಾನುವಾರ ಮಹಾಮಂಗಳವಾಗುವದು. ಸರ್ವರಿಗೂ ಸುಸ್ವಾಗತವನ್ನು ಕೋರಿದೆ.

**ಗ್ರಂಥಪ್ರಕಟನೆ:** 'ಭಗವದ್ಗೀತೆಯ ಉಪನ್ಯಾಸಗಳು' ಗ್ರಂಥದ ಮುದ್ರಣವು ಮುಂದುವರಿದಿದೆ. ಈವರೆಗೆ ೮೦ ಪುಟಗಳು ಪ್ರಿಂಟಾಗಿವೆ. 'ವಿಷ್ಣುಸಹಸ್ರನಾಮಸ್ತೋತ್ರ' (ಮೂಲ-ನಾಮಾವಳಿ)ಯನ್ನು ಪುನರ್ಮುದ್ರಣಕ್ಕೆ ಸ್ವೀಕರಿಸಲಾಗಿದೆ.

**ಹೊರಗಿನ ಸುದ್ದಿಗಳು :** (೧) **ಮೈಸೂರು ಶಾಖೆ** ಅಧ್ಯಾತ್ಮಪ್ರಕಾಶ ಕಾರ್ಯಾಲಯದಲ್ಲಿಯೂ ತಾ॥ 3-8-86ರಂದು ಶ್ರೀಶ್ರೀ ಆರಾಧನೋತ್ಸವವು ನೆರವೇರಿತು. ಪ್ರತಿದಿನವೂ ಈ ಶಾಖೆಯಲ್ಲಿ ಭಾಷ್ಯಪಾಠಗಳು ನಡೆಯುತ್ತಿವೆ. (೨) **ರಾಯದುರ್ಗದ** ಅಧ್ಯಾತ್ಮಪ್ರಚಾರಸೇವಾಶ್ರಮದಲ್ಲಿಯೂ ಪೂಜ್ಯ ಶ್ರೀಶ್ರೀಗಳವರ ವಾರ್ಷಿಕಾರಾಧನೆಯು ಶ್ರೀಶ್ರೀ ಭಗವತ್ಪಾದಸ್ವಾಮಿಗಳ ಸಂಮುಖದಲ್ಲಿ ವಿಜೃಂಭಣೆಯಿಂದ ನಡೆಯಿತು. (೩) **ತಲಕಾಡಿನಲ್ಲಿ** ಕನ್ನಡವಿಚಾರಸಾಹಿತ್ಯ ಸಂಕಿರಣಕಾರ್ಯಕ್ರಮವು ಶ್ರೀ ಕೆ. ನಿಸ್ಸಾರ್ ಅಹಮದ್‌ರವರ ಅಧ್ಯಕ್ಷತೆಯಲ್ಲಿ ಈಚೆಗೆ ಬಹಳ ಯಶಸ್ವಿಯಾಗಿ ನೆರವೇರಿತು. ಗ್ರಾಮಾಂತರಪ್ರದೇಶದಲ್ಲಿ ಮೊಟ್ಟಮೊದಲನೆಯ ಕಾರ್ಯಕ್ರಮವಿದು- ಎಂದು ಶ್ರೀ॥ ಆರ್. ವೆಂಕಟೇಶ್‌ರವರು ತಿಳಿಸುತ್ತಾರೆ. (ವಿವರವಾದ ವರದಿಯನ್ನು ಪ್ರಕಟಿಸಲು ಸಾಧ್ಯವಾಗದುದಕ್ಕಾಗಿ ಶ್ರೀಯುತರ ಕ್ಷಮೆ ಬೇಡಿದೆ).

**ಸಂಪಾದಕರು :** ಸ್ಥಳದಲ್ಲೇ ಇದ್ದಾರೆ. ಪ್ರವಾಸಗಳು ಇನ್ನೂ ಖಚಿತವಾಗಿಲ್ಲ.

---

॥ ಶ್ರೀ ಶಾರದಾಯೈ ನಮಃ ॥

ಯಾ ದೇವೀ ಸರ್ವಭೂತೇಷು ಶಕ್ತಿರೂಪೇಣ ಸಂಸ್ಥಿತಾ ।
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥

**ಅಧ್ಯಾತ್ಮಪ್ರಕಾಶಕಾರ್ಯಾಲಯ,**
**ಬೆಂಗಳೂರು ಶಾಖೆ,**
**ನಂ. 68, ೨ನೆಯ ಬ್ಲಾಕ್,**
**ತ್ಯಾಗರಾಜನಗರ, ಬೆಂಗಳೂರು-560028.**

(ಸಂಸ್ಥಾಪಕರು : ಪ.ಪ. ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಶ್ರೀಮದಕ್ಷಯನಾಮಸಂವತ್ಸರದ

# ಶ್ರೀಶರನ್ನವರಾತ್ರಮಹೋತ್ಸವಾಹ್ವಾನಪತ್ರಿಕಾ

ಇದೇ ಶ್ರೀಮತ್ ಅಕ್ಷಯನಾಮಸಂವತ್ಸರದ ಆಶ್ವಯುಜ ಶುದ್ಧ ಪ್ರತಿಪತ್ ತಾ॥ 4-10-86ನೇ ಶನಿವಾರದಿಂದ ಶುದ್ಧ ದಶಮಿ ತಾ॥ 12-10-86ನೇ ಭಾನುವಾರದವರೆಗೆ ಈ ಮೇಲಿನ ಆಶ್ರಮದಲ್ಲಿ

## ಶ್ರೀಶರನ್ನವರಾತ್ರಮಹೋತ್ಸವದ ಪ್ರಯುಕ್ತ

ಬೆಳಗ್ಗೆ ಯಥಾಶಕ್ತಿ ಪೂಜಾಪಾರಾಯಣಗಳು ನಡೆದು 9 ರಿಂದ 10 ರ ವರೆಗೆ ವೇ॥ ಬ್ರ॥ ಶ್ರೀ॥ ಕೆ. ಜಿ. ಸುಬ್ರಾಯಶರ್ಮಾ-ರವರಿಂದ ಸಾಧನಪ್ರಧಾನವಾದ ಶಾಂಕರಭಾಷ್ಯಪ್ರವಚನಗಳೂ ಸಾಯಂಕಾಲ 5 ರಿಂದ 6 ರ ವರೆಗೆ ಘನ ವಿದ್ವಾಂಸರುಗಳಿಂದ ದೇವೀವಿಷಯಕವಾದ ಉಪನ್ಯಾಸಗಳೂ ಹಿಂಬದಿಯಲ್ಲಿ ತಿಳಿಸಿರುವಂತೆ ನಡೆಯುತ್ತವೆ.

ತಮಗೆಲ್ಲರಿಗೂ ಆದರದ ಸುಸ್ವಾಗತ..

ಬೆಂಗಳೂರು-560028
26-9-1986

**ಕೆ. ಜಿ. ಸುಬ್ರಾಯಶರ್ಮಾ,**
ಕಾರ್ಯದರ್ಶೀ.

# ಕಾರ್ಯಕ್ರಮಗಳು

ಬೆಳಗ್ಗೆ 9ರಿಂದ 10ರ ವರೆಗೆ | ಸಾಯಂಕಾಲ 5ರಿಂದ 6ರ ವರೆಗೆ

1. 4-10-86ನೆಯ ಶನಿವಾರ

ಗೀ. ಭಾ. 6-5
ಆತ್ಮೋದ್ಧಾರ

ಪ್ರೊ. ಹೆಚ್.ಎಸ್. ವರದದೇಶಿಕಾಚಾರ್ಯರಂಗಪ್ರಿಯರು
**"ರಾಜರಾಜೇಶ್ವರೀ ಆರಾಧನೆ"**

2. 5-10-86ನೆಯ ಭಾನುವಾರ

ಗೀ. ಭಾ. 4-39
ಶ್ರದ್ಧೆಯಿಂದ ಜ್ಞಾನಪ್ರಾಪ್ತಿ

ವಿದ್ವಾನ್ ಜಿ. ಶಿವರಾಮ ಅಗ್ನಿಹೋತ್ರಿಗಳು
**"ಶಾರದೋಪಾಸನೆ"**

3. 6-10-86ನೆಯ ಸೋಮವಾರ

ಗೀ. ಭಾ. 6-35
ಅಭ್ಯಾಸವೈರಾಗ್ಯಗಳು

ವಿದ್ವಾನ್ ಎನ್.ಟಿ. ಶ್ರೀನಿವಾಸ ಅಯ್ಯಂಗಾರ್
**"ಮಹಾಲಕ್ಷ್ಮೀ ಆರಾಧನ"**

4. 7-10-86ನೆಯ ಮಂಗಳವಾರ

ಗೀ. ಭಾ. 7-14
ದೇವಪ್ರಪತ್ತಿಃ

ಪ್ರೊ. ಸಿ. ಅನಂತಾಚಾರ್
**"ದೇವೀ ಉಪಾಸನೆ"**

5. 8-10-86ನೆಯ ಬುಧವಾರ

ಗೀ. ಭಾ. 8-15
ಪರಾ ಸಂಸಿದ್ಧಿಃ

ತಪೋವಿಭೂಷಣ ಕೋಡೀಹಳ್ಳಿ ಶಂಕರನಾರಾಯಣಶಾಸ್ತ್ರಿಗಳು
**"ಗಾಯತ್ರೀ ಉಪಾಸನೆ"**

6. 9-10-86ನೆಯ ಗುರುವಾರ

ಕಾ. ಉ. ಭಾ. 2-12
ಜ್ಞಾನದಿಂದ ಶೋಕನಿವೃತ್ತಿ

ಶ್ರೀ ಕೆ.ಜಿ. ಸುಬ್ರಾಯಶರ್ಮಾ
**"ಈಶ್ವರೀ(ಐಶ್ವರೀ)ಶಕ್ತಿಃ"**

7. 10-10-86ನೆಯ ಶುಕ್ರವಾರ

ಮಾಂ. ಕಾ. ಭಾ. 3-40
ಮುಕ್ತಿಯು ಸ್ವಾಭಾವಿಕ

ಪಂಡಿತಪ್ರವರ ಎಂ. ಲಕ್ಷ್ಮೀನರಸಿಂಹಶಾಸ್ತ್ರಿಗಳು
**"ಲಲಿತಾಮಂತ್ರರಹಸ್ಯ"**

8. 11-10-86ನೆಯ ಶನಿವಾರ

ಬ್ರ. ಸೂ. ಭಾ. 1-1-4
ವಸ್ತುತಂತ್ರಜ್ಞಾನ

ಪ್ರೊ. ಬಿ. ಭೀಮಸೇನರಾವ್
**"ಕಾಮಾಕ್ಷೀ ಆರಾಧನ"**

9. 12-10-86ನೆಯ ಭಾನುವಾರ

ಛಾಂ. ಭಾ. 7-24-1
ಪೂರ್ಣಂ ಬ್ರಹ್ಮ

ವಿದ್ಯಾಲಂಕಾರ ಪ್ರೊ. ಎಸ್.ಕೆ. ರಾಮಚಂದ್ರರಾವ್
**"ಶ್ರೀ ವಿದ್ಯೋಪಾಸನೆ"**

(ವಿ.ಸೂ. ಈ ಉತ್ಸವಕ್ಕೆ ಕಾಣಿಕೆಗಳನ್ನು ಪ್ರೀತಿಯಿಂದ ಸ್ವೀಕರಿಸಲಾಗುತ್ತದೆ.)

# ಅಧ್ಯಾತ್ಮ ಪ್ರಕಾಶ

॥ ಓಮ್ ॥



ಸಂಪುಟ ೫೬]    ವರ್ಷಕ್ಕೆ ರೂ. ೧೫-೦೦ ; ಬಿಡಿ ಸಂಚಿಕೆಗೆ : ರೂ. ೧.೨೫    [ಸಂಚಿಕೆ ೨

**ಅಕ್ಟೋಬರ್-1986**

(ಶ್ರೀ ಅಕ್ಷಯಸಂವತ್ಸರದ ಆಶ್ವಯುಜ)

## ಪುಣ್ಯಲೋಕಗಳು ಅನಿತ್ಯವಾದವುಗಳು

**ಓಂ ॥ ತದ್ಯಥೇಹ ಕರ್ಮಜಿತೋ ಲೋಕಃ ಕ್ಷೀಯತೇ ಏವಮೇವಾ-
ಮುತ್ರ ಪುಣ್ಯಜಿತೋ ಲೋಕಃ ಕ್ಷೀಯತೇ ತದ್ಯ ಇಹಾತ್ಮಾನ-
ಮನನುವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾನ್ ತೇಷಾಂ
ಸರ್ವೇಷು ಲೋಕೇಷ್ವಕಾಮಚಾರೋ ಭವತಿ ॥**

—ಛಾಂದೋಗ್ಯೋಪನಿಷತ್ತು ೮-೧-೬

**ಭಾವಾರ್ಥ :-** ಹೇಗೆ ಇಲ್ಲಿ ಕರ್ಮಜಿತವಾದ ಲೋಕವು ಕ್ಷಯವಾಗುತ್ತದೆಯೋ ಹಾಗೆಯೇ ಇಲ್ಲಿ ಪುಣ್ಯಜಿತವಾದ ಲೋಕವು ಕ್ಷಯವಾಗುತ್ತದೆ. ಅವರೊಳಗೆ ಯಾರು ಇಲ್ಲಿ ಆತ್ಮನನ್ನೂ ಈ ಸತ್ಯವಾದ ಕಾಮಗಳನ್ನೂ ಅರಿತುಕೊಳ್ಳದೆ ಹೊರಟುಹೋಗುತ್ತಾರೋ ಅವರಿಗೆ ಎಲ್ಲಾ ಲೋಕಗಳಲ್ಲಿಯೂ ಅಕಾಮಚಾರವಿರುತ್ತದೆ.

[ಆತ್ಮಜ್ಞಾನವಿಲ್ಲದವರು ಪುಣ್ಯಕರ್ಮಗಳ ಬಲದಿಂದಲೇ ನಿತ್ಯಸುಖವನ್ನು ಪಡೆಯಲು ಯತ್ನಿಸುವರಾದರೂ ಅವರ ಲೋಕಗಳು ಕ್ಷಯವಾಗಿಬಿಡುವದರಿಂದ ಮತ್ತೆ ಸಂಸಾರಕ್ಕೇ ಹಿಂತಿರುಗುತ್ತಾರೆ. ಆದ್ದರಿಂದ ಅವರು ಅಸ್ವತಂತ್ರರೇ- ಎಂದಭಿಪ್ರಾಯ.]

---

# ಅಧ್ಯಾತ್ಮಸಂದೇಶ

(ಗುರುಕಿಂಕರ)

## ಪುಣ್ಯಲೋಕಗಳ ಪರಿಮಿತಿ

ಛಾಂದೋಗ್ಯೋಪನಿಷತ್ತಿನಲ್ಲಿ ಈಗ ವಿಚಾರಮಾಡುತ್ತಿರುವ ದಹರೋಪಾಸನಾಪ್ರಕರಣದಲ್ಲಿ ಹೃದಯಾಂತರ್ಗತನಾದ ಸತ್ಯಕಾಮಾದಿಗುಣಗಳಿಂದ ಕೂಡಿದ ಆತ್ಮನನ್ನು ಅರಿತುಕೊಂಡು ಉದ್ಧಾರವಾಗಬೇಕೆಂದು ತಿಳಿಸುತ್ತಾಬಂದಿದೆ. ಈ ಆತ್ಮನನ್ನು ಅರಿತುಕೊಳ್ಳದೆ ಉಪಾಯಾಂತರಗಳಿಂದ ಮೋಕ್ಷವನ್ನು ಸಾಧಿಸಲಾಗುವದಿಲ್ಲವೆ? ಏಕೆ ಆಗುವದಿಲ್ಲ? ಎಂಬುದನ್ನೀಗ ವಿಚಾರಮಾಡಲಾಗುವದು. ಏಕೆಂದರೆ ವೇದಶಾಸ್ತ್ರಗಳಲ್ಲಿ ಮಾನವನಿಗೆ ಪುರುಷಾರ್ಥಸಿದ್ಧಿಗಾಗಿ ಕರ್ಮ, ಉಪಾಸನೆ, ಜ್ಞಾನಗಳೆಂಬ ಸಾಧನತ್ರಯಗಳನ್ನೂ ಹೇಳಿದೆ. ಪರಮಪುರುಷಾರ್ಥವೆನಿಸಿರುವ ಮೋಕ್ಷಕ್ಕೆ ಮಾತ್ರ ಆತ್ಮಜ್ಞಾನವೊಂದೇ ಉಪಾಯವೆಂದೂ ತಿಳಿಸಿದೆ. ಕೆಲವರಿಗೆ ಜ್ಞಾನದಂತೆಯೇ ಕರ್ಮೋಪಾಸನೆಗಳೂ ಮುಕ್ತಿಗೆ ಏಕೆ ಉಪಾಯವಾಗಿರಬಾರದು? ಜ್ಞಾನದ್ದೇನು ಹೆಚ್ಚುಗಾರಿಕೆ? ಸಾಧನಗಳೆಲ್ಲ ವೇದೋಕ್ತಗಳೇ ಆಗಿರುವಾಗ ಜ್ಞಾನವೊಂದೇ ಮುಕ್ತಿಗೆ ಸಾಧನವೆಂದೇಕೆ ಹೇಳಬೇಕು? ಎಂಬ ಸಂಶಯವು ಬರಬಹುದು. ಆದ್ದರಿಂದ ಇಲ್ಲಿ ಜ್ಞಾನಕ್ಕೂ ಕರ್ಮೋಪಾಸನೆಗಳಿಗೂ ಇರುವ ವೈಲಕ್ಷಣ್ಯವನ್ನು ತಿಳಿಸುವ ಮೂಲಕ ಆಯಾ ಸಾಧನಗಳ ಪರಿಮಿತಿಯನ್ನೂ ಅವುಗಳಿಂದ ಸಿಗುವ ಫಲಗಳ ತಾರತಮ್ಯವನ್ನೂ ಕುರಿತು ವಿಚಾರಿಸಲಾಗುವದು.

ಆತ್ಮನೆಂಬವನು ಸರ್ವರ ಹೃದಯದೇಶದಲ್ಲಿಯೂ ಇದ್ದುಕೊಂಡಿರುವನೆಂಬುದು ನಿಜ. ಗೀತೆಯಲ್ಲಿಯೂ 'ಎಲೈ ಅರ್ಜುನನೆ, ಈಶ್ವರನು ಸರ್ವಭೂತಗಳ ಹೃದಯದಲ್ಲಿಯೂ ಇದ್ದಾನೆ' ಎಂದೇ ತಿಳಿಸಿದೆ. ಆದರೂ ಆತ್ಮನನ್ನು ತಪ್ಪಾಗಿ ತಿಳಿದುಕೊಂಡಿರುವದೇ ನಮ್ಮಗಳ ಸ್ವಭಾವವಾಗಿದೆ. ವಿಚಾರಮಾಡಿ ಸರಿಯಾಗಿ ತಿಳಿದರೆ ಎಲ್ಲರೂ ಜೀವನ್ಮುಕ್ತಿಯನ್ನೇ ಹೊಂದಬಹುದು. ಆದರೆ ಜನರಿಗೆ ಆತ್ಮವಿಚಾರಕ್ಕಿಂತಲೂ ಅನಾತ್ಮವಿಚಾರಗಳಲ್ಲಿಯೇ ಹೆಚ್ಚು ಆಸಕ್ತಿಯಿರುತ್ತದೆ. ಹಾಗೆಯೇ ಅನಾತ್ಮವಸ್ತುಗಳಲ್ಲಿಯೇ ಪ್ರೀತಿಯೂ ಬೆಳೆದುಬಿಟ್ಟಿರುತ್ತದೆ. ನಿಜವೇನೆಂದರೆ ಅಜ್ಞರ ದೃಷ್ಟಿಯಲ್ಲಿ ಅನಾತ್ಮಗಳೂ ಆತ್ಮನೆಂದೇ ಭಾವಿಸಲ್ಪಟ್ಟಿರುತ್ತವೆ. ಆದ್ದರಿಂದ ತಮಗಿಂತ ಬೇರೆಯೆಂದು ಗೊತ್ತಿರುವ ಪದಾರ್ಥಗಳನ್ನು ಕೂಡ ತನಗಾಗಿ ಬೇಕು-ಎಂದು ಬಯಸುವದು ಸ್ವಭಾವವಾಗಿರುತ್ತದೆ. ಹೀಗೆ ಬಯಕೆಯಿರುವದರಿಂದ ಅದರ ಪ್ರಾಪ್ತಿಗಾಗಿ ಕರ್ಮವನ್ನು ಮಾಡುತ್ತಾರೆ. ಕಡೆಗೆ ಅವರಿಗೆ ಕರ್ಮದಿಂದ ಎಲ್ಲವನ್ನೂ ಪಡೆದುಕೊಳ್ಳಬಹುದು- ಎಂಬ ಭಾವನೆಯುಂಟಾಗಿ ತಮ್ಮ ಸ್ವರೂಪವೇ ಆಗಿರುವ ಮುಕ್ತಿಯು ಕೂಡ ಪಡೆದುಕೊಳ್ಳತಕ್ಕದ್ದೆಂದೂ ಅದಕ್ಕಾಗಿ ಕರ್ಮಗಳನ್ನು ಮಾಡಬೇಕೆಂದೂ ನಿಶ್ಚಿತವಾಗಿಬಿಟ್ಟಿರುತ್ತದೆ. ಇಂಥವರನ್ನು ಇಲ್ಲಿ ಅಜ್ಞರೆಂದು

ಕರೆದಿದೆ. ಇವರಿಗೆ ಜ್ಞಾನದ ಮಹಿಮೆಯಾಗಲಿ ಮುಕ್ತಿಯ ಸ್ವಭಾವವಾಗಲಿ ತಿಳಿದಿರುವದಿಲ್ಲ. ಬೃಹದಾರಣ್ಯಕೋಪನಿಷತ್ತಿನಲ್ಲಿ ಒಂದುಕಡೆ ಹೀಗೆಂದಿದೆ: 'ಈ ಪುರುಷನು ತನ್ನನ್ನು ನಿತ್ಯಶುದ್ಧಬುದ್ಧಮುಕ್ತನಾದ ಆತ್ಮನೆಂದು ಅರಿತುಕೊಂಡವನಾದರೆ ಏನನ್ನು ಬಯಸಿ ಏತಕ್ಕಾಗಿ ಈ ಶರೀರವನ್ನು ದಂಡಿಸಿಯಾನು ?' ಇದರಿಂದ ತಿಳಿದುಬರುವದೇನೆಂದರೆ : ಆತ್ಮನ ವಿಷಯದಲ್ಲಿರುವ ಅಜ್ಞಾನವೇ ಕರ್ಮಪ್ರವೃತ್ತಿಗೆ ಕಾರಣವೆಂದು ಮತ್ತೆ ಹೇಳಬೇಕಾಗಿಲ್ಲ. ಕರ್ಮಿಗಳ ಭಾವನೆಯಂತೆ ಮಾಡಿ ಪಡೆಯತಕ್ಕದ್ದೇ ಸುಖವು ; ಅದೇ ಸ್ವರ್ಗವು ; ಅದೇ ಆನಂದವು ; ಮೋಕ್ಷವೆಂಬುದೂ ಪರಮಸುಖಸ್ವರೂಪವಾದ್ದರಿಂದ ಅದೂ ಮಾಡಿ ಪಡೆಯತಕ್ಕದ್ದೇ- ಎಂಬುದು ಅವರ ತೀರ್ಮಾನವಾಗಿರುತ್ತದೆ.

ಈಗ ಶ್ರುತಿಯು ಇಂಥ ಭಾವನೆಯುಳ್ಳವರನ್ನು ಕುರಿತು ಹೀಗೆ ಹೇಳುತ್ತಿದೆ ; "ಕರ್ಮದಿಂದ ಗೆದ್ದುಕೊಂಡ ಲೋಕವು ಕ್ಷಯವಾಗುವಂತೆಯೇ ಪುಣ್ಯದಿಂದ ಸಂಪಾದಿಸಿದ ಲೋಕವೂ ಕ್ಷಯವಾಗುತ್ತದೆ" ಇದರ ಅಭಿಪ್ರಾಯವೇನೆಂದರೆ : ಶಾಸ್ತ್ರದಲ್ಲಿಯೇ ಸ್ವರ್ಗಕಾಮನಾದವನು ಜ್ಯೋತಿಷ್ಟೋಮಯಾಗವನ್ನು ಮಾಡಬೇಕೆಂದು ಹೇಳಿರುವದರಿಂದ ಜ್ಯೋತಿಷ್ಟೋಮವೆಂಬ ಕರ್ಮದಿಂದ ಸ್ವರ್ಗಸುಖವು ಗೆಲ್ಲಲ್ಪಡತಕ್ಕದ್ದಾಯಿತು. ಇದನ್ನು 'ಕರ್ಮಜಿತ'ವೆನ್ನುವರು. ಇದು ಸರಿ. ಆದರೆ ಹೀಗೆ ಗೆದ್ದುಕೊಂಡ ಸುಖವು ನಿತ್ಯವೆ ? ಶಾಶ್ವತವೆ ? ಎಂಬಿದನ್ನೂ ವಿಚಾರ ಮಾಡಬೇಕು. ಕರ್ಮಿಗಳಿಗೆ ಈ ಕಡೆಗೆ ದೃಷ್ಟಿಯಿರುವದಿಲ್ಲ. ಪ್ರಯಾಣಿಕನಾದವನು ಹೇಗೆ ವಾಹನದಲ್ಲಿ ತನಗಾಗಿ ಸೀಟನ್ನು ಕಾದಿರಿಸಿ ಹಣದಿಂದ ತನ್ನದಾಗಿಮಾಡಿಕೊಳ್ಳುವನೋ- ಆದರೆ ತಾನು ಪ್ರಯಾಣಿಕನಾದ್ದರಿಂದ ಪ್ರಯಾಣವು ಮುಗಿದ ಮೇಲೆ ಆ ಸೀಟನ್ನು ಬಿಟ್ಟಳಿಯಲೇಬೇಕಾಗುವದೆಂಬುದನ್ನು ಆಗ್ಗೆ ಮರೆತಿರುವನೋ ಹಾಗೆ- ಕರ್ಮಿಯು ತಾನು ಸಂಪಾದಿಸಿರುವ ಪುಣ್ಯವು ಸುಖಕ್ಕೆ ಸಾಧನವೆಂದು ತಿಳಿದಿರುವ ಕಾಲಕ್ಕೆ ಆ ಸುಖವು ಕ್ಷಯವಾಗತಕ್ಕದ್ದೆಂಬುದನ್ನು ಮರೆತಿರುತ್ತಾನೆ. ಶ್ರುತಿಯು ಇದನ್ನು ನೆನಪಿಗೆ ತಂದುಕೊಡುತ್ತಿದೆ. ಪುಣ್ಯದಿಂದ ಸಂಪಾದಿಸಿರಬಹುದಾದರೂ ಆ ಪದಾರ್ಥದ ಅನಿತ್ಯತ್ವವನ್ನು ಅಲ್ಲಗಳೆಯಲಾದೀತೆ ? ಅದು ಎಂದಾದರೊಮ್ಮೆ ನಮ್ಮನ್ನು ಬಿಟ್ಟುಹೋಗದೆ ಇದ್ದೀತೆ? ಆದ್ದರಿಂದಲೇ ಕರ್ಮವಾಗಲಿ, ಕರ್ಮಫಲವಾದ ಪುಣ್ಯಲೋಕಗಳಾಗಲಿ, ನಮ್ಮ ಸ್ವರೂಪಭೂತವಾದ ಮುಕ್ತಿಗೆ ಸಮನಲ್ಲ. ನಮ್ಮ ಆತ್ಮಸ್ವರೂಪವನ್ನು ನಾವು ಹೊಸದಾಗಿ ಸಂಪಾದಿಸಿಕೊಳ್ಳಬೇಕಾದದ್ದೇ ಇಲ್ಲ. ಇರುವದನ್ನು ಸರಿಯಾಗಿ ತಿಳಿದರೆ ಸಾಕು. ಇದು ಜ್ಞಾನವೆನಿಸುವದು. ಜ್ಞಾನದ ಫಲವಾದ ಮುಕ್ತಿಯಾದರೋ ಅನಾತ್ಮಲೋಕದಂತೆ ಅಲ್ಲ. ಹೀಗೆ ಮುಕ್ತಿಗೂ ಲೋಕಾಂತರಪ್ರಾಪ್ಯವಾದ ಸುಖಕ್ಕೂ ತಾರತಮ್ಯವಿರುತ್ತದೆ.

ಈಗ ಸಾಧಕನ ಅಧಿಕಾರವನ್ನು ವಿಚಾರಮಾಡೋಣ. ಯಾವನಿಗೆ ಕಾಮಗಳು ಸಾಕಷ್ಟು ದೊರಕಿದಮೇಲೂ ಅವುಗಳನ್ನು ಅನುಭವಿಸಿದಮೇಲೂ ತೃಪ್ತಿ

ಯಾಗಲಿ ವೈರಾಗ್ಯವಾಗಲಿ ಉಂಟಾಗುವದಿಲ್ಲವೋ ಅಂಥವನು ಮತ್ತೆಮತ್ತೆ ಕರ್ಮೋಪಾಸನೆಗಳನ್ನೇ ಕೈಗೊಳ್ಳಬೇಕಾಗುವದು. ಆದರೆ ಪುಣ್ಯವಿಶೇಷದಿಂದ ಯಾವನ ಮನಸ್ಸು ಪರಿಶುದ್ಧವಾಗಿ ನಿತ್ಯಾನಿತ್ಯವಿವೇಕವು ಮೂಡಿರುವದೋ ಅಂಥವನು ಕರ್ಮಸಂನ್ಯಾಸಮಾಡಿ ಶಮದಮಾದಿಗಳಿಂದ ಕೂಡಿ ಆತ್ಮಜಿಜ್ಞಾಸೆಯನ್ನು ಮಾಡಬೇಕಾಗುವದು. ಈ ವಿಷಯದಲ್ಲಿ ತನ್ನ ಮಾರ್ಗವು ಯಾವದೆಂಬುದನ್ನು ಆಯಾ ಸಾಧಕನೇ ಗೊತ್ತುಪಡಿಸಿಕೊಳ್ಳಬೇಕು. ಪ್ರತಿಯೊಬ್ಬ ಸಾಧಕನೂ ಒಂದಲ್ಲ-ಒಂದು ದಿನ, ಕರ್ಮಫಲಗಳ ಅನಿತ್ಯತ್ವಕ್ಕೆ ಬೇಸತ್ತು ನಿತ್ಯವಾದ ಶಾಶ್ವತವಾದ ಸುಖಪ್ರಾಪ್ತಿಗೆ ಹಾದಿಯು ಯಾವದೆಂಬುದನ್ನು ಹುಡುಕುತ್ತಾ ಜ್ಞಾನಮಾರ್ಗಕ್ಕೆ ಬರಲೇಬೇಕಾಗುವದು. ಹಾಗೆ ಬಂದವನಿಗೆ ಶ್ರುತಿಯು ಈ ಕರ್ಮಜ್ಞಾನಗಳ ಫಲವೈಲಕ್ಷಣ್ಯವನ್ನು ತಿಳಿಸಿಕೊಟ್ಟು ಆತ್ಮಜ್ಞಾನಕ್ಕೆ ಕೊಂಡೊಯ್ಯುತ್ತದೆ. ಜ್ಞಾನಫಲವಾದ ಮುಕ್ತಿಯೆಂದರೂ ಬ್ರಹ್ಮವೆಂದರೂ ಒಂದೇ. 'ಬ್ರಹ್ಮವನ್ನೇ ಮುಕ್ತಿಯೆನ್ನುವರು' ಎಂದು ಶ್ರೀ ಶಂಕರಾಚಾರ್ಯರು ತಿಳಿಸಿರುತ್ತಾರೆ. ಅದ್ದರಿಂದ ಹುಟ್ಟಿರುವ ವ್ಯಕ್ತಿಯು ಒಮ್ಮೆ ಆತ್ಮನನ್ನು ಕಂಡುಕೊಳ್ಳಲೇಬೇಕು. ಇಲ್ಲವಾದರೆ ಹುಟ್ಟುಸಾವುಗಳಿಂದಲಾಗಲಿ ಕರ್ಮಫಲೋಪಭೋಗಕ್ಷಯಗಳಿಂದಾಗಲಿ ಬಿಡುಗಡೆಯಾಗುವಂತೆಯೇ ಇಲ್ಲ.

ಈಗ ಶ್ರುತಿಯು ಆತ್ಮಜ್ಞಾನವಿಲ್ಲದೆ ಈ ಲೋಕವನ್ನು ಬಿಟ್ಟುಹೊರಡುವವರ ಪಾಡನ್ನು ವಿವರಿಸುತ್ತದೆ. ಯಾರು ಆತ್ಮನನ್ನರಿಯದೆ ಹಾಗೂ ಆತ್ಮನಲ್ಲಿಯೇ ಎಲ್ಲಾ ಕಾಮಗಳೂ ಅಡಕವಾಗಿವೆಯೆಂಬ ನಿಜವನ್ನು ಅರ್ಥಮಾಡಿಕೊಳ್ಳದೆ ದೇಹವನ್ನು ಬಿಟ್ಟು ತೆರಳುವರೋ ಅವರಿಗೆ ಯಾವ ಪುಣ್ಯಲೋಕಗಳಲ್ಲಿಯೂ ಸ್ವಾತಂತ್ರ್ಯವಿರುವದಿಲ್ಲ. ಕಾಮಚಾರವೂ ಇರುವದಿಲ್ಲ. ಕಾಮಚಾರವೆಂದರೆ ತನ್ನ ಇಚ್ಛಾನುಸಾರವಾಗಿ ನಡೆದುಕೊಳ್ಳುವದು. ಅದು ಸಾಧ್ಯವಾಗುವದಿಲ್ಲ. ಹೇಗೆ ನಮಗೆ ರಾಜಕೀಯಸ್ವಾತಂತ್ರ್ಯವು ಬಂದಿದ್ದರೂ ಮತದಾನಮಾಡಬಹುದೇ ಹೊರತು ಮಂತ್ರಿಗಳ ಆಸನದಲ್ಲಿ ಕೂಡಲಾಗುವದಿಲ್ಲವೋ ಸರಕಾರದ ಕಾನೂನುಗಳಿಗೆ ಒಳಪಟ್ಟೇ ನಡೆಯಬೇಕಾಗಿರುವದೋ ಹಾಗೆಯೇ ಅಜ್ಞರು ಇಂದ್ರಾದಿದೇವತೆಗಳ ಲೋಕಕ್ಕೆ ತಮ್ಮ ಪುಣ್ಯಾನುಗುಣವಾಗಿ ಹೋದರೂ ಅಲ್ಲಿ ದೇವರಾಜನ ಅಧೀನರಾಗಿಯೇ ತಮ್ಮ ಪುಣ್ಯದ ಫಲಕ್ಕೆ ತಕ್ಕಷ್ಟೇ ಸುಖಸಾಧನಗಳಿಂದ ಬಾಳಬೇಕಾಗುವದು. ಅಂಥ ಪುಣ್ಯಲೋಕಗಳಲ್ಲಿಯೂ ಅಸೂಯೆ, ಭಯ, ದ್ವೇಷ-ಮುಂತಾದ ಸಂಸಾರದೋಷಗಳಿದ್ದೇ ಇರುವವು. ಕರ್ಮೋಪಾಸನೆಗಳು ಇದಕ್ಕಿಂತ ಹೆಚ್ಚಿನ ಫಲವನ್ನೆಂದಿಗೂ ಉಂಟುಮಾಡಲಾರವು.

ಆದರೆ ಆತ್ಮನನ್ನರಿತುಕೊಂಡು ಈ ಲೋಕವನ್ನು ಬಿಡುವವರಿಗೆ ಮಾತ್ರ ಸ್ವಾತಂತ್ರ್ಯವೂ ಕಾಮಚಾರವೂ ಎಲ್ಲಾ ಲೋಕಗಳಲ್ಲಿಯೂ ಇರುತ್ತದೆ-ಎಂಬಿದನ್ನು ಈಗ ಶ್ರುತಿಯು ತಿಳಿಸುತ್ತಿದೆ. ಕಸ್ತೂರಿಮೃಗವೆಂಬ ಒಂದು ಪ್ರಾಣಿಯುಂಟು. ಒಂದು ಸಮಯದಲ್ಲಿ ಅದರ ಹೊಟ್ಟೆಯಲ್ಲೇ ಕಸ್ತೂರಿಯು ಉತ್ಪತ್ತಿಯಾಗಿ

ಸುವಾಸನೆಯು ಹೊರಡುತ್ತದೆಯಂತೆ. ಆ ಪ್ರಾಣಿಗೆ ಇದು ತಿಳಿಯದು. ಸುವಾಸನೆಯು ಮಾತ್ರ ಗೊತ್ತಾಗುವದರಿಂದ 'ಅದು ಎಲ್ಲಿಂದಲೋ ಬರುತ್ತಿದೆ. ಆ ಪದಾರ್ಥವೇನಿರಬಹುದು? ಅದನ್ನು ನಾನು ಪಡೆಯುವದು ಹೇಗೆ?' ಎಂದುಕೊಂಡು ದಿಕ್ಕುದಿಕ್ಕಿಗೂ ಓಡುತ್ತದೆಯಂತೆ. ನಿಜವೇನು? ಅದರ ಹೊಟ್ಟೆಯಲ್ಲೇ ಪರಿಮಳವು ಅಡಗಿದೆಯಲ್ಲವೆ? ಹಾಗೆಯೇ ನಮ್ಮ ಆತ್ಮನಲ್ಲಿಯೇ ಎಲ್ಲಾ ಕಾಮಗಳೂ ಅಡಗಿರುತ್ತವೆ. ಅವನೇ ಕಸ್ತೂರಿಯಿದ್ದಂತೆ. ಅವನು ನಮ್ಮ ಹೃದಯಪುಂಡರೀಕದಲ್ಲಿರುವ ದಹರಾಕಾಶದಲ್ಲಿಯೇ ಇರುತ್ತಾನೆ. ಆದರೂ ಮೃಗಬುದ್ಧಿಯ ನಾವುಗಳು ಅವನನ್ನರಿಯೆವು. ಆದ್ದರಿಂದ ಮೃಗವು ಪರಿಮಳವನ್ನು ಅರಸಿಕೊಂಡು ಹೋಗುವಂತೆ ನಾವು ಕರ್ಮಗಳನ್ನು ಮಾಡಿ ಸುಖಕ್ಕಾಗಿ ಲೋಕಾಂತರಗಳನ್ನೆಲ್ಲ ಸಂಚರಿಸುವೆವು. ಕೊನೆಗೆ ನಿರಾಶೆಯೇ, ಬಂಧನವೇ, ಅಸ್ವಾತಂತ್ರ್ಯವೇ ಫಲವಾಗಿರುವದು. ಇದು ನಮ್ಮ ದಡ್ಡತನದ ಪರಮಾವಧಿಯಲ್ಲದೆ ಮತ್ತೇನು? ಹಾಗಾಗದಂತೆ ನಾವು ಶಾಸ್ತ್ರಾಚಾರ್ಯೋಪದೇಶಗಳಿಂದ ಈಗಲೇ ಇಲ್ಲಿಯೇ ನಮ್ಮ ಆತ್ಮನನ್ನು ಕಂಡುಕೊಳ್ಳಬೇಕು. ಅವನು ಸತ್ಯಕಾಮ, ಸತ್ಯಸಂಕಲ್ಪನೆಂಬುದನ್ನೂ ವಿಜರನೂ ವಿಮೃತ್ಯುವೂ ವಿಶೋಕನೂ ಆಗಿರುವನೆಂಬುದನ್ನೂ ದೃಢಪಡಿಸಿಕೊಳ್ಳಬೇಕು. ಆಗ ನಾವು ದೇಹಧಾರಿಗಳಾಗಿರಲಿ, ದೇಹವನ್ನು ತ್ಯಜಿಸಿ ಲೋಕಾಂತರಗಳಿಗೇ ತೆರಳಲಿ– ಎಲ್ಲೆಲ್ಲಿಯೂ ಸ್ವಾತಂತ್ರ್ಯವೂ ಕಾಮಚಾರವೂ ಇದ್ದುಕೊಂಡಿರುವದು– ಎಂದು ಶ್ರುತಿಯು ತಿಳಿಸುತ್ತಿದೆ.

ಈಗ ಕಾಮಚಾರ-ಸ್ವಾತಂತ್ರ್ಯವೆಂದರೇನೆಂಬುದನ್ನು ಶ್ರುತಿಯು ವಿವರಿಸುತ್ತದೆ. ಆತ್ಮಜ್ಞನು ಪಿತೃಲೋಕಕ್ಕೆ ಹೋಗಬೇಕೆಂದು ಬಯಸಿದನಾದರೆ ಅವನ ಸಂಕಲ್ಪಮಾತ್ರದಿಂದಲೇ ಪಿತೃಗಳು ಎದುರಿಗೇ ಬಂದು ದರ್ಶನವನ್ನು ನೀಡುವರು. ಹೀಗೆಯೇ ಯಾವ ಬಂಧುಗಳಾಗಲಿ, ಸ್ನೇಹಿತರಾಗಲಿ ನೆನೆಸಿಕೊಂಡ ಮಾತ್ರದಿಂದ ಪ್ರತ್ಯಕ್ಷರಾಗಿಬಿಡುವರು. ಮತ್ತು ಆತ್ಮಜ್ಞನು ಬಯಸಬಹುದಾದ ದೇಶ, ಕಾಮಗಳು, ಭೋಗಗಳು, ಸುಖಸಾಮಗ್ರಿಗಳು–ಎಲ್ಲವೂ ಸಂಕಲ್ಪಮಾತ್ರದಿಂದಲೇ ಒದಗಿಬಿಡುವವು. ಭರದ್ವಾಜರು ಹೇಗೆ ಭರತನಿಗೂ ಅವನ ಸೈನ್ಯಕ್ಕೂ ಆತಿಥ್ಯಮಾಡಲು ಇಚ್ಛಿಸಿ ಸಂಕಲ್ಪಮಾತ್ರದಿಂದ ಗಂಧರ್ವಾಪ್ಸರಾದಿಗಳನ್ನೂ ಭಕ್ಷ್ಯಭೋಜ್ಯನಿವಾಸ ವಿಹಾರಾದಿಗಳನ್ನೂ ಬರಮಾಡಿಕೊಂಡರೋ ಅವೆಲ್ಲವೂ ಹೇಗೆ ಅವರ ಆತ್ಮಜ್ಞಾನದ ಮಹಿಮೆಯಾಗಿತ್ತೋ ಹಾಗೆಯೇ ಪ್ರತಿಯೊಬ್ಬನಿಗೂ ಅವನವನ ಹೃದಯಾಕಾಶದಲ್ಲಿ ಆತ್ಮದರ್ಶನವಾದರೆ ಸರ್ವಕಾಮಗಳೂ ಸ್ವಾತಂತ್ರ್ಯವೂ ಲಭಿಸುವವು. ಆತ್ಮೋಪಾಸನೆ–ಅಥವಾ ದಹರೋಪಾಸನೆಯು ಉಳಿದ ದೇವತೋಪಾಸನೆಗಳಂತೆ ಅಲ್ಲ. ಏಕೆಂದರೆ ದೇವತೋಪಾಸನೆಯಲ್ಲಿ ಭೇದಬುದ್ಧಿಯು ಉಳಿದೇ ಇರುತ್ತದೆ. ಆದ್ದರಿಂದ ಅದಕ್ಕೆ ಸಂಸಾರಗೋಚರವಾದ ಅನಿತ್ಯಫಲವೇ ಗತಿ. ಆತ್ಮೋಪಾಸನೆಯು ಸರ್ವಾತ್ಮಭಾವಕ್ಕೆ ಕೊಂಡೊಯ್ಯುವದರಿಂದ ಇದು ನಿತ್ಯವು–ಎಂದಭಿಪ್ರಾಯ.

———

# ಸಾಮಾನ್ಯನೀತಿ

**ಯಾವತ್ ಸ್ವಾಸ್ಥ್ಯಮಿದಂ ಶರೀರಮರುಜಂ ಯಾವಜ್ಜರಾ ದೂರತೋ
ಯಾವಚ್ಚೇಂದ್ರಿಯಶಕ್ತಿರಪ್ರತಿಹತಾ ಯಾವತ್ ಕ್ಷಯೋ ನಾಯುಷಃ ।
ಆತ್ಮಶ್ರೇಯಸಿ ತಾವದೇವ ವಿದುಷಾ ಕಾರ್ಯಃ ಪ್ರಯತ್ನೋ ಮಹಾನ್
ಸಂದೀಪ್ತೇ ಭವನೇ ತು ಕೂಪಖನನಂ ಪ್ರತ್ಯುದ್ಯಮಃ ಕೀದೃಶಃ ॥೧॥**

೧. ದೇಹವು ರೋಗಾದಿಗಳಿಲ್ಲದೆ ಆರೋಗ್ಯಸ್ಥಿತಿಯಲ್ಲಿರುವಾಗ, ಇನ್ನೂ ಮುಪ್ಪು ಇಂದ್ರಿಯಗಳಿಗೆ ತಗುಲದೆ ಇರುವಾಗ, ಹಾಗೂ ಇಂದ್ರಿಯಸಾಮರ್ಥ್ಯವು ಕುಂಠಿತವಾಗದೆ ಇರುವಾಗ, ಆಯುಷ್ಯವು ಪೂರೈಸಿಹೋಗದೆ ಉಳಿದಿರುವಾಗಲೇ ಜ್ಞಾನನಾದವನು ತನ್ನ ಆತ್ಮೋದ್ಧಾರಕ್ಕಾಗಿ ಹೆಚ್ಚಿನ ಪ್ರಯತ್ನವನ್ನು ಮಾಡಿಬಿಡಬೇಕು. ಇಲ್ಲವಾದರೆ ಮನೆಗೆ ಬೆಂಕಿಬಿದ್ದು ಉರಿಯುತ್ತಿರುವಾಗ ಭಾವಿಯನ್ನು ತೋಡುವ ಸಾಹಸದಂತೆ ಮೂರ್ಖತನವಾದೀತು.

**ಮಿತ್ರಂ ಸ್ವಚ್ಛತಯಾ ರಿಪುಂ ನಯಬಲೈರ್ಲುಬ್ಧಂ ಧನೈರೀಶ್ವರಂ
ಕಾರ್ಯೇಣ ದ್ವಿಜಮಾದರೇಣ ಯುವತಿಂ ಪ್ರೇಮ್ಣಾ ಶಮೈರ್ಬಾಂಧವಾನ್
ಅತ್ಯುಗ್ರಂ ಸ್ತುತಿಭಿರ್ಗುರುಂ ಪ್ರಣತಿಭಿರ್ಮೂರ್ಖಂ ಕಥಾಭಿರ್ಬುಧಂ
ವಿದ್ಯಾಭೀ ರಸಿಕಂ ರಸೇನ ಸಕಲಂ ಶೀಲೇನ ಕುರ್ಯಾದ್ವಶಮ್ ॥೨॥**

೨. ಸ್ನೇಹಿತನನ್ನು ಪರಿಶುದ್ಧನಡತೆಯಿಂದ, ಶತ್ರುವನ್ನು ನೀತಿಬಲದಿಂದ, ಜಿಪುಣನನ್ನು ಹಣದಿಂದ, ಯಜಮಾನನನ್ನು ತನ್ನ ಸೇವಾಕಾರ್ಯಗಳಿಂದ, ಬ್ರಾಹ್ಮಣನನ್ನು ಗೌರವಾದರಗಳಿಂದ, ಹೆಂಗಸನ್ನು ಪ್ರೇಮದಿಂದ, ಬಂಧುಗಳನ್ನು ಶಾಂತಿಸಮಾಧಾನಗಳಿಂದ, ಅತಿ ದುಷ್ಟನನ್ನು ಹೊಗಳುವದರಿಂದ, ಗುರುವನ್ನು ನಮಸ್ಕರಿಸುವದರಿಂದ, ಮೂರ್ಖನನ್ನು ಕಥೆಗಳಿಂದ, ವಿದ್ವಾಂಸನನ್ನು ವಿದ್ಯೆಗಳಿಂದ, ರಸಿಕನನ್ನು ಶೃಂಗಾರ-ಹಾಸ್ಯಾದಿರಸಗಳಿಂದ ಕಡೆಗೆ ಎಲ್ಲವನ್ನೂ ತನ್ನ ಒಳ್ಳೆಯ ನಡತೆಯಿಂದ ಗೆದ್ದುಕೊಳ್ಳಬೇಕು.

**ಲೋಭಶ್ಚೇದಗುಣೇನ ಕಿಂ ಪಿಶುನತಾ ಯದ್ಯಸ್ತಿ ಕಿಂ ಪಾತಕೈಃ
ಸತ್ಯಂ ಚೇತ್ತಪಸಾ ಚ ಕಿಂ ಶುಚಿ ಮನೋ ಯದ್ಯಸ್ತಿ ತೀರ್ಥೇನ ಕಿಮ್ ।
ಸೌಜನ್ಯಂ ಯದಿ ಕಿಂ ಗುಣೈಃ ಸ್ವಮಹಿಮಾ ಯದ್ಯಸ್ತಿ ಕಿಂ ಮಂಡನೈಃ
ಸದ್ವಿದ್ಯಾ ಯದಿ ಕಿಂ ಧನೈರಪಯಶೋ ಯದ್ಯಸ್ತಿ ಕಿಂ ಮೃತ್ಯುನಾ ॥೩॥**

೩. ಜಿಪುಣತನವಿದ್ದಲ್ಲಿ ಉಳಿದ ದುರ್ಗುಣಗಳಿಂದೇನು? ಚಾಡಿಕೋರತನವಿರುವದಾದರೆ ಉಳಿದ ಪಾಪಗಳಿಂದೇನು? ಸತ್ಯವಿದ್ದರೆ ತಪಸ್ಸಿನಿಂದೇನು? ಶುದ್ಧ ಮನಸ್ಸಿದ್ದರೆ ತೀರ್ಥದಿಂದೇನು? ಸೌಜನ್ಯವಿದ್ದರೆ ಉಳಿದ ಗುಣಗಳಿಂದೇನು? ಸ್ವಂತವಾದ ಪ್ರತಿಭೆಯಿದ್ದರೆ ಅಲಂಕಾರಗಳಿಂದೇನು? ಸದ್ವಿದ್ಯೆಯಿದ್ದರೆ ಧನದಿಂದೇನು? ಅಪಕೀರ್ತಿಯಿರುವದಾದರೆ ಸಾವಿನಿಂದೇನು?

---

# ಸತ್ಯಕಾಮನ ಪತ್ರಗಳು

## ಶಿಕ್ಷಕರ ದಿನಾಚರಣೆ

"ನಮ್ಮ ಊರಿನಲ್ಲಿ ಇದೇ ಸೆಪ್ಟೆಂಬರ್ ಐದರಂದು ಶಿಕ್ಷಕರ ದಿನಾಚರಣೆ ನಡೆಯಿತು. ಕೆಲವೇ ಮಂದಿ ಶಿಕ್ಷಕರು ಹಾಜರಿದ್ದರು. ಆ ಸಭೆಯಲ್ಲಿ ದಿ|| ಡಾ|| ರಾಧಾಕೃಷ್ಣನ್‌ರವರನ್ನು ಸ್ಮರಿಸಿ ಗೌರವಿಸಲಾಯಿತು. ಭಾಷಣಕಾರರುಗಳು ದಿವಂಗತರ ಗುಣಗಾನಮಾಡಿದ್ದಲ್ಲದೆ ಶಿಕ್ಷಕರ ಸಮಸ್ಯೆಗಳನ್ನು ಮುಂದಿಟ್ಟು ಸರ್ಕಾರದ ವತಿಯಿಂದಲೂ ಸಾರ್ವಜನಿಕರಿಂದಲೂ ಸಹಕಾರವನ್ನು ಕೋರಿದರು. ಶಿಕ್ಷಕರೇ ಭಾವಿ ರಾಷ್ಟ್ರನಿರ್ಮಾಪಕರು- ಎಂದೂ ಸ್ತುತಿಸಲಾಯಿತು. ನನಗೇನೊ, ಶಿಕ್ಷಣ ಹಾಗೂ ಶಿಕ್ಷಕರ ಪರಿಸ್ಥಿತಿಯ ವಿಚಾರದಲ್ಲಿ ಇನ್ನೂ ಕೆಲವು ಸಂಶಯಗಳಿದ್ದೇ ಇವೆ. ನಿಮ್ಮ ಅಭಿಪ್ರಾಯದಲ್ಲಿ ಶಿಕ್ಷಕರ ದಿನಾಚರಣೆಯ ಪ್ರಯೋಜನವೇನು ? ನಾವು ಪಾಲಿಸಬೇಕಾದ ಆದರ್ಶಗಳೇನಾದರೂ ಇವೆಯೆ ? ತಿಳಿಸಬಲ್ಲಿರಾ ?" ಎಂದು ಕೇಳಿ ನೀವು ಬರೆದ ಪತ್ರವು ಬಂದಿದೆ.

ನಾನು ಸಾಮಾಜಿಕ ಹಾಗೂ ರಾಜಕೀಯದೃಷ್ಟಿಯಿಂದ ಇಂಥ ವಿಚಾರಗಳನ್ನು ವಿವೇಚಿಸಲು ಸಮರ್ಥನಲ್ಲ. ನಮ್ಮ ದೇಶದಲ್ಲಿ ಇನ್ನುಮುಂದೆ ಶಿಕ್ಷಣವು ಹೇಗಿರಬೇಕು? ಎಂಬಿದನ್ನು ಸ್ವಾತಂತ್ರ್ಯವು ಲಭಿಸಿದಾಗಿನಿಂದಲೂ ಜನನಾಯಕರು ನಿರ್ಧರಿಸುತ್ತಲೇ ಇದ್ದಾರೆ. ಬದಲಾವಣೆಗಳನ್ನೂ ತರುತ್ತಲೇ ಇದ್ದಾರೆ. ಅಕ್ಷರಾಭ್ಯಾಸದಿಂದಾರಂಭಿಸಿ ಸ್ನಾತಕೋತ್ತರಶಿಕ್ಷಣದವರೆಗೂ ವಿಚಾರತಜ್ಞರು ಆಲೋಚಿಸಿ ಅನೇಕ ರೀತಿಯ ಪ್ರಯೋಗಗಳನ್ನೂ ಪರಿವರ್ತನೆಗಳನ್ನೂ ಶಿಕ್ಷಕರಮೇಲೂ ವಿದ್ಯಾರ್ಥಿಗಳಮೇಲೂ ಹೇರುತ್ತಲೇ ಇದ್ದಾರೆ. ಇತ್ತೀಚೆಗಂತೂ ಇಪ್ಪತ್ತೊಂದನೆಯ ಶತಮಾನಕ್ಕೆ ಸಮಗ್ರರಾಷ್ಟ್ರವನ್ನೇ ಒಯ್ಯುವ ಪ್ರಯತ್ನವು ನಡೆದಿದೆ. ಆದರೂ ಇಡಿಯ ಭಾರತದೇಶಕ್ಕೇ ಅನ್ವಯಿಸುವಂಥ ಸಮರ್ಥಶಿಕ್ಷಣನೀತಿಯು ಇನ್ನೂ ರೂಪಿತವಾಗಿಲ್ಲವೆನ್ನಬೇಕಾಗಿದೆ. ಭಾಷಾಸಮಸ್ಯೆ, ಹಿಂದುಳಿದವರಿಗೆ ಅವಕಾಶಗಳನ್ನು ಕಾದಿರಿಸುವಿಕೆ, ಅಂತರರಾಷ್ಟ್ರೀಯವ್ಯವಹಾರಕ್ಕೆ ಯಾವ ಭಾಷೆಯನ್ನು ಕಲಿಯಬೇಕು ? ನಮ್ಮ ಪ್ರಾಚೀನಸಂಸ್ಕೃತಿ, ಆದರ್ಶಗಳ ರಕ್ಷಣೆಗೆ ಏನುಮಾಡಬೇಕು ? ವಿಜ್ಞಾನದ ನಾಗಾಲೋಟಕ್ಕೆ ಹೊಂದುವಂತೆ ಶಿಕ್ಷಣವನ್ನು ಮಾರ್ಪಡಿಸುವದು ಹೇಗೆ- ಇತ್ಯಾದಿ ವಿಚಾರಗಳಲ್ಲಿ ಪ್ರತಿದಿನವೂ ಸಮಾವೇಶಗಳೂ ಚಿಂತನೆಗಳೂ ನಿರ್ಣಯಗಳೂ ಬರುತ್ತಲೇ ಇವೆ. ಈ ವಿಷಮಪರಿಸ್ಥಿತಿಯಲ್ಲಿ ಎಂಥ ಪ್ರಾಜ್ಞನಿಗಾದರೂ ನಿರ್ಧಾರವನ್ನು ಸರ್ವಸಮ್ಮತವಾಗಿ ಕೈಗೊಳ್ಳಲು ಕಡುಕಷ್ಟವೆನಿಸಿದೆ. ಆದ್ದರಿಂದ ಬುದ್ಧಿಜೀವಿಗಳಾದ ಶಿಕ್ಷಕರು ಈಗ ಎಚ್ಚತ್ತು ಸಾಧ್ಯವಾದಮಟ್ಟಿಗೂ ಸಮಾಜಕ್ಕೆ ಉಪಕಾರವಾಗುವಂಥ ರೀತಿನೀತಿಗಳಿಂದ ಎಲ್ಲರೊಡನೆ ಸಹಕರಿಸಬೇಕೇ ಹೊರತು ತಾವೇ ಸ್ವಯಂಸಮಸ್ಯೆಯಾಗಿ ಕೂಡಬಾರದು.

ಶಿಕ್ಷಣಕ್ಷೇತ್ರವನ್ನು ಉಳಿದ ಎಲ್ಲಾ ಕ್ಷೇತ್ರುಗಳ ಸಂಪರ್ಕದಿಂದ ಬಿಡಿಸಿ ಮೂಲಭೂತವಾಗಿ ವಿಚಾರಮಾಡಿದಹೊರತು ಈ ಕಗ್ಗಂಟುಗಳು ಪರಿಹಾರವಾಗಲಾರವು. ಹೇಗೆಂದರೆ: ಮಾನವನಿಗೆ ಬುದ್ಧಿಯನ್ನು ದೇವರು ಅನುಗ್ರಹಿಸಿರುವದರಿಂದ ಆ ಬುದ್ಧಿಶಕ್ತಿಯ ವಿಕಾಸಕ್ಕೆ ಶಿಕ್ಷಣವು ಅಗತ್ಯವಾಗುತ್ತದೆ. ಇಲ್ಲವಾದರೆ ಸ್ವೇಚ್ಛೆಯಿಂದ ಹರಿಯುವ ಬುದ್ಧಿಯು ಅವನನ್ನು ಸಮಾಜಕಂಟಕನನ್ನಾಗಿಯೂ ಮಾಡಬಲ್ಲದು. ಆದ್ದರಿಂದ ಸಾಮಾನ್ಯಮಟ್ಟದ ಬೌದ್ಧಿಕಶಿಕ್ಷಣವು ಎಲ್ಲರಿಗೂ ಕಡ್ಡಾಯವೆಂಬುದಕ್ಕೆ ಎರಡಿಲ್ಲ. ಇನ್ನು ಬುದ್ಧಿಗೆ ಆದರ್ಶವೇನು? ಅದು ಹೇಗಿರಬೇಕು? ಎಂಬ ಪ್ರಶ್ನೆಗೆ ಅಧ್ಯಾತ್ಮಶಾಸ್ತ್ರವು ಉತ್ತರವನ್ನು ನೀಡುತ್ತದೆ. ರಾಮಾದಿಗಳಂತೆ ಇರಬೇಕು. ರಾವಣಾದಿಗಳಂತೆ ಇರಬಾರದು- ಎಂಬಿದೇ ಆ ಉತ್ತರವು. ಮನುಷ್ಯನು ಕೇವಲ ಅಕ್ಷರಜ್ಞಾನಸಂಪನ್ನನಾದರೆ ಸಾಲದು. ಅವನಿಗೆ ಹೃದಯವೂ ಇರುವದರಿಂದ ಅಕ್ಷರಜ್ಞಾನವು ಹೃದಯವಿಜ್ಞಾನದೊಡನೆ ಹೊಂದಿಕೊಳ್ಳಬೇಕು- ಎಂದರೆ ವಿದ್ಯೆಯು ತನ್ನೊಡನೆ ವಿನಯ, ಸೌಜನ್ಯ, ದಯೆ, ಪರೋಪಕಾರ, ಸಮತ್ವ, ಆರ್ಜವ- ಮುಂತಾದ ಆತ್ಮಗುಣಗಳೊಡನೆಯೂ ಸಂಪನ್ನವಾಗಬೇಕು. ಇಲ್ಲವಾದರೆ ಸುಭಾಷಿತಕಾರರು ಹೇಳುವಂತೆ ಕೇವಲ 'ಸಾಕ್ಷರ'ರು ತಿರುಗಿಬಿದ್ದಾಗ 'ರಾಕ್ಷಸ'ರಾಗಿಬಿಡುವರು. ಈಗಿನ ವಿದ್ಯಾಭ್ಯಾಸವು ಹೀಗಾಗಿಯೇ ನಮ್ಮಲ್ಲಿ ಸಮಸ್ಯೆಗಳು ಬೆಳೆಯುತ್ತಿವೆ. ವಿದ್ಯೆಯು ಯಾವಾಗಲೂ ಮಾನವನಲ್ಲಿ ಸಹಜವಾಗಿರುವ ಓರೆಕೋರೆಗಳನ್ನು ತಿದ್ದಿ-ಶಿಲ್ಪಿಯು ಕಲ್ಲನ್ನು ವಿಗ್ರಹವಾಗಿ ಕಡೆಯುವಂತೆ- ಆದರ್ಶವ್ಯಕ್ತಿಯನ್ನಾಗಿ ಸಿದ್ಧಗೊಳಿಸುವ ಸಾಧನವಾಗಿರುವದು. ಗುರುವೇ ಈ ಶಿಲ್ಪಿಯಾಗಿರುವನು. ಇಂಥ ರಾಷ್ಟ್ರಶಿಲ್ಪಿಯಾದ ಗುರುವು ಅಥವಾ ಶಿಕ್ಷಕನು ತನ್ನ ಸ್ವಾರ್ಥವನ್ನು ಬದಿಗಿರಿಸಿ ದುಡಿದರೆ ಮಾತ್ರವೇ ಭವಿಷ್ಯದ ಪ್ರಜೆಗಳು ಸುಶಿಕ್ಷಿತರಾಗುವರು. ಆದರೆ ಇಂಥ ತ್ಯಾಗಕ್ಕೆ ಈಗ ಎಷ್ಟು ಜನ ಶಿಕ್ಷಕರು ಮುಂದೆ ಬಂದಾರು? ಯೋಚಿಸಿರಿ.

ಇನ್ನೂ ಒಂದು ಮಾತು. ವೃತ್ತಿಶಿಕ್ಷಣಕ್ಕೂ ಬೌದ್ಧಿಕಶಿಕ್ಷಣಕ್ಕೂ ನಾವು ಭೇದವನ್ನೇ ಅರಿತಂತೆ ಕಾಣುತ್ತಿಲ್ಲ. ಏಕೆಂದರೆ ವೃತ್ತಿಶಿಕ್ಷಣವು ಹೊಟ್ಟೆಯಪಾಡಿನದಾಗಿದೆ. ಅದನ್ನು ಎಲ್ಲರಿಗೂ ಒದಗಿಸಬೇಕಾದದ್ದು ಸರ್ಕಾರದ ಕರ್ತವ್ಯವೇ ಸರಿ. ಇನ್ನು ಬೌದ್ಧಿಕ ಉನ್ನತಿಗೆ ಅಗತ್ಯವಾದ ವಿದ್ಯಾಶಿಕ್ಷಣವು ಬುದ್ಧಿಪ್ರಧಾನರಿಗೇ ಮೀಸಲಾಗಿರಬೇಕಾದ್ದು ಅಗತ್ಯವಾಗಿದೆ. ಬೇರೆಯವರಿಗೆ ಇದು ಹೊರೆಯಾಗಿಬಿಡುವದು. ಈಗಲೂ ನಮ್ಮಲ್ಲಿ ಬುದ್ಧಿಜೀವಿಗಳ ಹಿಡಿತದಲ್ಲೇ ಉಳಿದೆಲ್ಲ ಸಮಾಜವೂ ಸ್ಪಂದಿಸುತ್ತಿದೆ. ಆದ್ದರಿಂದ ಬುದ್ಧಿಜೀವಿಯು ಸದ್ಬುದ್ಧಿಸಂಪನ್ನನಾಗಿರಬೇಕಾದದ್ದು ಅನಿವಾರ್ಯವೆನಿಸಿದೆ. ಸದ್ಬುದ್ಧಿಯಾದರೊ, ಶಾಸ್ತ್ರಾಭ್ಯಾಸದಿಂದಲೇ ದೊರಕಬೇಕು. ಆದ್ದರಿಂದ ವಿದ್ಯೆಗಾಗಿ ವಿದ್ಯೆಯನ್ನು ಸಂಪಾದಿಸುವೆನೆಂಬ ಭಾವನೆಯುಳ್ಳ ಶಿಕ್ಷಕರೂ ವಿದ್ಯಾರ್ಥಿಗಳೂ ಹೆಚ್ಚಬೇಕು-ಎಂದು ನನ್ನ ಅಭಿಪ್ರಾಯ.

———

# ಆರಿಸಿದ ಅರಳುಮೊಗ್ಗುಗಳು

(ಭಗವದ್ಗೀತೆಯ ಉಪನ್ಯಾಸಗಳು-ಎಂಬ ಗ್ರಂಥದಿಂದ)

೧. ಮನುಷ್ಯನಿಗೆ ಭಾವನೆಯೆಂಬುದು ಸಹಜವಾಗಿರುತ್ತದೆ. ಆದರೆ ಯಾವದಾದರೊಂದು ವಸ್ತುವಿನ ಭಾವನೆಯನ್ನು ಹತ್ತಿಸಿಕೊಂಡು ಜನರು ಕೆಡುವರು. ಅನೃತವಾದ ವಸ್ತುವನ್ನು ಭಾವನೆಮಾಡಿದರೂ ಅದು ನಮಗೆ ದೊರೆಯಲಾರದು. ದೂರದಲ್ಲಿರುವ ದೀಪದ ಕುಡಿಯನ್ನು ಕಂಡು ರತ್ನವೆಂದು ಭಾವಿಸಿಕೊಂಡರೆ ಅದು ನಿಜವಾಗಿ ರತ್ನವಾದೀತೆ? ಆದರೆ ದೂರದಲ್ಲಿ ಕಾಣುವ ರತ್ನದ ಪ್ರಭೆಯಿಂದ ಅಲ್ಲಿ ರತ್ನವಿರುವದೆಂದು ಕಲ್ಪಿಸುವದೂ ಭ್ರಮೆಯೇ ಆದರೂ ಆ ಭಾವನೆಯಿಂದ ಮುಂದುವರೆಯುವವನಿಗೆ ನಿಜವಾದ ರತ್ನವೇ ಸಿಗುತ್ತದೆ. ಹೀಗೆ ವಸ್ತ್ವನುಸಾರಿಯಾಗಿರುವ ಭ್ರಮೆಗೆ **ಸಂವಾದಿಭ್ರಮೆ**- ಎಂದು ಹೆಸರು. ಆತ್ಮವಸ್ತುವನ್ನೂ ಇದ್ದದ್ದು ಇದ್ದಂತೆ ಅರಿತುಕೊಳ್ಳುವಷ್ಟು ಸೂಕ್ಷ್ಮವಾದ ಬುದ್ಧಿಯು ಇಲ್ಲದ ಮಧ್ಯಮಾಧಿಕಾರಿಗಳಿಗೆ ಶಾಸ್ತ್ರದಲ್ಲಿ ಉಪದೇಶಿಸಿರುವ ಉಪಾಸನೆಯೆಂಬುದು ಈ ಸಂವಾದಿಭ್ರಮೆಯಂತೆ ವಸ್ತುಪ್ರಾಪ್ತಿಗೆ ಸಾಧನವಾಗಿರುತ್ತದೆ. ಅದರಿಂದ ಈಲ್ಲಿಯೇ ಈಗಲೇ ವಸ್ತುವು ದೊರಕದಿದ್ದರೂ ಕಾಲಾಂತರದಲ್ಲಿ ದೇಶಾಂತರದಲ್ಲಿ ದೊರಕುತ್ತದೆ.

೨. ಭಾವನೆಯು ಫಲಕಾರಿಯಾಗುವದು ಹೇಗೆ? ಎಂಬುದರ ತತ್ತ್ವವನ್ನು ನಾವು ಸ್ವಲ್ಪ ಪರಿಶೀಲಿಸುವದೊಳ್ಳೆಯದು. ಮನಸ್ಸಿನಲ್ಲಿ ಒಂದು ವಿಲಕ್ಷಣಶಕ್ತಿಯಿದೆ. ಅದರಲ್ಲಿ ಎಂಥ ಭಾವನೆಯು ಪ್ರಬಲವಾಗಿರುವದೋ ಅದಕ್ಕೆ ಅನುಗುಣವಾಗಿ ಭಾವುಕನ ಸುತ್ತುವಳಿಯವು ಏರ್ಪಡುತ್ತದೆ. ಜನರ ಮನಸ್ಸಿನಲ್ಲಿ ಬಗೆಬಗೆಯ ಭಾವನೆಗಳು ಒಂದಾಗುತ್ತಲೊಂದರಂತೆ ಎದ್ದುಕೊಳ್ಳುತ್ತಲೇ ಇರುವವು. ಅವುಗಳಲ್ಲಿ ಕೆಲವು ಒಳ್ಳೆಯ ಫಲವನ್ನು ಕೊಡುವ ಭಾವನೆಗಳು. ಇನ್ನು ಕೆಲವು ಕೆಟ್ಟ ಫಲವನ್ನು ಕೊಡುವ ಭಾವನೆಗಳು. ಇನ್ನೂ ಕೆಲವು ಸಾಮಾನ್ಯವಾದ ಔದಾಸೀನ್ಯರೂಪದವು. ಆದರೆ ಬಗೆಬಗೆಯಾದ ಭಾವನೆಗಳು ಮನಸ್ಸಿನಲ್ಲಿ ಏಳುತ್ತಿರುವದರಿಂದ ಮಾಲಿನ್ಯವುಂಟಾಗುವದೇ ಹೊರತು ಹೊಸದಾದ ಫಲವು ಯಾವದೂ ಅದಕ್ಕೆ ಕಾಣುವದಿಲ್ಲ. ಆದರೆ ಉತ್ಕಟವಾದ ಭಾವನೆಗಳು ಇದ್ದರೆ ಮಾತ್ರ ಮನಸ್ಸನ್ನು ತಮ್ಮ ವಶಕ್ಕೆ ತೆಗೆದುಕೊಂಡು ಮನಸ್ಸನ್ನೂ ಅವನ ಸನ್ನಿವೇಶವನ್ನೂ ತಮಗೆ ಅನುಗುಣವಾಗಿ ಮಾರ್ಪಡಿಸುವವು. ಉಪಾಸನೆಯನ್ನು ಮಾಡುವವರು ಶ್ರದ್ಧಾವಿಶ್ವಾಸಗಳಿಂದ ಎಡೆಬಿಡದೆ ದೀರ್ಘಕಾಲದವರೆಗೆ ಭಾವನೆಮಾಡುತ್ತಲೇ ಇರಬೇಕು. ಶಾಸ್ತ್ರೋಕ್ತವಾದ ಭಾವನೆಯನ್ನು ಸಾಯುವವರೆಗೂ ಮಾಡುತ್ತಿರಬೇಕೆಂದು ವಿಧಿಸಿರುವದಕ್ಕೆ ಇದೇ ಕಾರಣವು. ಇದರಿಂದ ಬದುಕಿರುವಾಗಲೇ ಸಾಕ್ಷಾತ್ಕಾರವೆಂಬ ಫಲವಾಗುತ್ತದೆ. ಮನುಷ್ಯನು ಹುಟ್ಟಿದ್ದಕ್ಕೆ ಪರಮೇಶ್ವರನ ಚಿಂತೆಯನ್ನು ಮನಸ್ಸಿಗೆ ಹತ್ತಿಸಿಕೊಳ್ಳಬೇಕು. ಅದೇ ಜನ್ಮಸಾಫಲ್ಯವು.

---

# ಅಗ್ನಿದೇವತೆ

(ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಪರಮಾತ್ಮನು ಸರ್ವಕಾರಣನೂ ಸರ್ವವ್ಯಾಪಕನೂ ಪರಮಸೂಕ್ಷ್ಮನೂ ಆಗಿದ್ದುಕೊಂಡು ಎಲ್ಲಕ್ಕೂ ಆತ್ಮನಾಗಿರುತ್ತಾನೆ. ಆದ್ದರಿಂದ ಅವನ ಹೊರಮೈಯಾದ ಈ ಜಗತ್ತನ್ನು ನಾವು ಒಳಹೊಕ್ಕು ಸೂಕ್ಷ್ಮಸೂಕ್ಷ್ಮತರವಾಗಿರುವ, ಉತ್ತರೋತ್ತರವ್ಯಾಪಕವಾದ ಕಾರಣತತ್ತ್ವಗಳನ್ನು ಕಂಡುಕೊಂಡು ಅವುಗಳನ್ನು ಕುರಿತು ಚಿಂತನೆಮಾಡುವದರಿಂದ ಕ್ರಮಕ್ರಮವಾಗಿ ಪರಮಾತ್ಮತತ್ತ್ವವನ್ನು ನೇರಾಗಿ ಕಂಡುಕೊಳ್ಳುವದಕ್ಕೆ ಸಹಾಯವಾಗುತ್ತದೆ. ಅತ್ಯಂತಸೂಕ್ಷ್ಮವಾಗಿರುವ ಆಕಾಶವನ್ನು ಅರಿತುಕೊಳ್ಳುವದಕ್ಕೆ ಮೊದಲು ವಾಯುತತ್ತ್ವವನ್ನು ತಿಳಿದುಕೊಳ್ಳಬೇಕಾಗಿರುವಂತೆ, ವಾಯುತತ್ತ್ವವನ್ನು ಅರಿತುಕೊಳ್ಳುವದಕ್ಕೆ ಅದರ ಕಾರ್ಯವಾದ, ಅದರಿಂದ ವ್ಯಾಪ್ತವಾಗಿರುವ, ಅದಕ್ಕಿಂತಲೂ ಸ್ಥೂಲವಾಗಿರುವ ಅಗ್ನಿಯನ್ನು ಕುರಿತು ಚಿಂತನೆಮಾಡಬೇಕಾಗಿರುತ್ತದೆ.

ಅಗ್ನಿ– ಎಂದರೆ ಬೆಂಕಿ ಎಂದು ನಾವು ಸಾಧಾರಣವಾಗಿ ತಿಳಿಯುತ್ತೇವೆ. ಇದೇನೂ ತಪ್ಪಲ್ಲ. ಆದರೆ ಎಲ್ಲೆಲ್ಲಿ ಔಷ್ಣ್ಯವಿರುವದೋ, ಎಲ್ಲೆಲ್ಲಿ ಬೆಳಕಿರುವದೋ ಎಲ್ಲೆಲ್ಲಿ ಶಕ್ತಿಯು ಪ್ರಕಟವಾಗಿರುವದೋ ಅದೆಲ್ಲವೂ ಅಗ್ನಿ, ತೇಜಸ್ಸು– ಎಂಬುದು ನಿಜಕ್ಕೆ ಹತ್ತಿರವಾಗಿರುತ್ತದೆ. ವಾಯುಮಂಡಲದಲ್ಲಿ ಘರ್ಷಣೆಯಿಂದ ತೋರಿಕೊಳ್ಳುವ ಬೆಳಕೆಲ್ಲವೂ ಅಗ್ನಿಯೇ ಆಗಿದೆ. ಆಕಾಶದಲ್ಲಿ ನಮ್ಮ ಮೇಲುಗಡೆಯಲ್ಲಿ ಕಾಣಿಸಿಕೊಳ್ಳುವ ಸೂರ್ಯ, ಚಂದ್ರ, ಅಂಗಾರಕಾದಿಗಳು, ನಕ್ಷತ್ರಗಳು– ಇವೆಲ್ಲ ಅಗ್ನಿಯ ರೂಪಗಳೇ. ಮೋಡದಲ್ಲಿ ಕಾಣಿಸಿಕೊಳ್ಳುವ ಮಿಂಚೂ ನಮ್ಮ ಸುತ್ತಲಿನ ಸಂನಿವೇಶವನ್ನೆಲ್ಲ ವ್ಯಾಪಿಸಿಕೊಂಡಿರುವ ವಿದ್ಯುಚ್ಛಕ್ತಿಯೂ ಅಗ್ನಿಯೇ. ಭೂಮಿಯ ಮೇಲೆ ಕಾಣಿಸುತ್ತಿರುವ ಪ್ರಾಣಿಗಳಲ್ಲಿ ಮತ್ತು ಮನುಷ್ಯರಲ್ಲಿ ಹುದುಗಿರುವ ಶಾಖವೂ ಅಗ್ನಿಯದೇ. ಅಗ್ನಿಯ ನೆರವಿಲ್ಲದೆ ಭೂಮಿಯಮೇಲೆ ಸ್ಥಾವರಜಂಗಮಪ್ರಾಣಿಗಳು ಜೀವಿಸಿರಲಾರವು. ಕೆಲಸಮಾಡಲಾರವು. ಬೆಳೆಯಲಾರವು. ಭೂಗರ್ಭದಲ್ಲಿಯೂ ಈ ಅಗ್ನಿಯ ವ್ಯಾಪಾರವೇ ಇರುತ್ತದೆ. ಅಗ್ನಿಯ ಪಾಕದಿಂದ, ಅಗ್ನಿಯ ಪಾಚನಶಕ್ತಿಯಿಂದ, ಅಗ್ನಿಯ ಬೆಳಕು ಬೀರುವ ಶಕ್ತಿಯಿಂದ– ಎಲ್ಲಾ ಬಗೆಯಿಂದಲೂ ಅಗ್ನಿಯಿಂದಲೇ ಈ ವಿಶ್ವವು ತನ್ನ ಕಾರ್ಯವನ್ನು ಮಾಡುತ್ತಿರುವದು.

ಹೊರಗೆ ಕಾಣುವ ಬಿಸಿ, ಬೆಳಕು, ಬೇಯಿಸುವ ಶಕ್ತಿ– ಇವುಗಳಷ್ಟೇ ಅಗ್ನಿಯಲ್ಲ. ಈ ಅಗ್ನಿಯ ತಿರುಳಾಗಿರುವ ಚೈತನ್ಯವೇ ಅಗ್ನಿಯ ಪರಮಾರ್ಥಸ್ವರೂಪ. ಪರಮಾತ್ಮನು ಆಕಾಶವಾಯುಗಳಂತೆ ಅಮೂರ್ತನಾಗಿಯೂ ಇರುವನು. ತೇಜಸ್ಸುಳ್ಳ ವಸ್ತುಗಳಂತೆ ಮೂರ್ತನೂ ಆಗಿ ಕಾಣಿಸಿಕೊಳ್ಳುತ್ತಿರುವನು. ಪ್ರಲಯದಲ್ಲಿ ಎಲ್ಲವನ್ನೂ 'ಅತ್ತಿ' ತಿಂದುಹಾಕುವವನಾದ್ದರಿಂದ ಪರಮಾತ್ಮನೇ ಮುಖ್ಯಾರ್ಥದಲ್ಲಿ ಅಗ್ನಿಯಾಗಿರುವನು.

———

# ಗ್ರಂಥಪರಿಚಯ

**೧. ಶ್ರೀ ಯಾಮುನಾಚಾರ್ಯವಿರಚಿತ- ಚತುಃಶ್ಲೋಕಿ ಮತ್ತು ಸ್ತೋತ್ರರತ್ನಂ**- ಕನ್ನಡ ಅನುವಾದ, ಪೀಠಿಕೆ- ಇತ್ಯಾದಿಗಳೊಡನೆ : ಬರೆದವರು: ವಿದ್ಯಾರತ್ನಂ ಬಾಲಧನ್ವೀ ಎಸ್. ರಂಗಾಚಾರ್, ಎಂ.ಎ., ಪ್ರಕಾಶಕರು : ಭಕ್ತ ಮಂಡಳಿ, ಪೋಸ್ಟ್‌ಬಾಕ್ಸ್ ನಂ. 222, ದಾವಣಗೆರೆ-2. ಪುಟಗಳು; ಕ್ರೌನ್ ೬೪.

ದಾವಣಗೆರೆ ಭಕ್ತಮಂಡಳಿಯವರು ಶ್ರೀ ಆಳವಂದಾರ್ ತಿರುನಕ್ಷತ್ರದ (21-7-86) ಸವಿನೆನಪಾಗಿ ಈ ಪುಸ್ತಕವನ್ನು ಮಹಾಜನರಿಗೆ ಮುಫತ್ತಾಗಿ ಹಂಚಿರುತ್ತಾರೆ. ಶ್ರೀವೈಷ್ಣವ ಸಂಪ್ರದಾಯಪರಂಪರೆಯ ಪೂಜ್ಯ ಗುರುಗಳಾದ ಯಾಮುನಾಚಾರ್ಯರ ಚರಿತ್ರೆಯೂ ಇದರಲ್ಲಿ ಅಡಕವಾಗಿದೆ. ಶ್ರೀ ಯಾಮುನಮುನಿಗಳೇ ರಚಿಸಿರುವ ಚತುಃಶ್ಲೋಕಿಯು ಲಕ್ಷ್ಮೀಸ್ತೋತ್ರ ರೂಪದಲ್ಲಿದೆ. ಸ್ತೋತ್ರರತ್ನದಲ್ಲಿ ೬೪ ಶ್ಲೋಕಗಳಿವೆ. ಎಲ್ಲಾ ಪದ್ಯಗಳನ್ನೂ ಓದಲು ಅನುಕೂಲವಾಗುವಂತೆ ಬಿಡಿಸಿ ಮುದ್ರಿಸಲಾಗಿದೆ. ಭಾವಾರ್ಥವನ್ನೂ ಕೊಡಲಾಗಿದೆ ಈ ಸ್ತೋತ್ರಗಳ ಮಹಿಮೆಯನ್ನು ಅನುವಾದಕರು ಪೀಠಿಕೆಯಲ್ಲಿ ವಿವರವಾಗಿ ತಿಳಿಸಿದ್ದಾರೆ. ಭಕ್ತ ಮಂಡಳಿಯವರ ಈ ಸಾರಸ್ವತಸೇವೆಯು ಇನ್ನೂ ಹೆಚ್ಚುಹೆಚ್ಚಾಗಿ ಅಭಿವೃದ್ಧಿಹೊಂದಲೆಂದು ಹಾರೈಸುತ್ತೇವೆ.

**೨. ಶ್ರೀ ಲಕ್ಷ್ಮೀನರಸಿಂಹಸುಪ್ರಭಾತಮ್ :** ಬರೆದವರು : ಪ್ರ. ಶ್ರೀ. ಸಂಪತ್ಕುಮಾರಾಚಾರ್ಯರು ; ಪ್ರಕಾಶಕರು : ಇಂದಿರಾಪ್ರಕಾಶನ, ನಂ. ೧, ಜಲಪುರಿ, ಮೈಸೂರು-10 ; ಪುಟಗಳು ; ಕ್ರೌನ್ ೭೬ ; ಬೆಲೆ ೮ ರೂ.

ಪ್ರತಿವಾದಿ ಭಯಂಕರ ಶ್ರೀಸಂಪತ್ಕುಮಾರಾಚಾರ್ಯರು ಸಂಸ್ಕೃತದಲ್ಲಿ ಆಶುಕವಿಗಳಾಗಿದ್ದರು. ನಾನಾಶಾಸ್ತ್ರಗಳ ಪಾಂಡಿತ್ಯ, ಹಳಗನ್ನಡದಲ್ಲಿಯೂ ವಿದ್ವತ್ತು, ಘನಾಂತವೇದಾಧ್ಯಯನಾದಿಗಳಿಂದ ಪ್ರಸಿದ್ಧರಾದ ಇವರು ಮೈಸೂರು ಮಹಾರಾಜರ ಆಸ್ಥಾನವಿದ್ವಾಂಸರಾಗಿದ್ದರು. ನಿತ್ಯಜೀವನದಲ್ಲಿ ಕರ್ಮಠರು ; ಜಪತಪನಿರತರು. ಇಂಥ ಮಹನೀಯರು ದೇವರಾಯನದುರ್ಗದ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯನ್ನು ಕುರಿತು ಸುಪ್ರಭಾತ, ಸ್ತೋತ್ರ, ಶರಣಾಗತಿ- ಮಂಗಳ ರೂಪವಾಗಿ ರಚಿಸಿರುವ ಕಾವ್ಯವೇ ಈ ಗ್ರಂಥದ ವಸ್ತುವಾಗಿದೆ. ದುರ್ಗದ ಪರಿಸರವನ್ನು ಅಂತಶ್ಚಕ್ಷುವಿನಲ್ಲಿ ಕಂಡುಕೊಂಡು ಭಕ್ತಿಭಾವದಲ್ಲಿ ತುಂಬಿ ಕಾವ್ಯರೂಪದಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ. ಬಿಗಿಯಾದ ಪದಬಂಧ, ರೋಚಕವರ್ಣನೆಗಳಿಂದ ಸಾಹಿತ್ಯವು ಶೋಭಿಸುತ್ತಿದೆ. ಪದ್ಯಗಳಿಗೆ ಭಾವಾರ್ಥವೂ ಇದೆ. ಪುಸ್ತಕದ ಮುದ್ರಣ, ಕಲಾವಿನ್ಯಾಸ, ರಕ್ಷಾಕವಚಗಳು ಗ್ರಂಥದ ಸೊಬಗನ್ನು ಹೆಚ್ಚಿಸಿವೆ. ಗ್ರಂಥಕ್ಕೆ ನಮ್ಮ ಸುಸ್ವಾಗತ !

೩. **Naiskarmya Siddhi** of Sureswaracharya ; English Translation by S. S. Raghavachar ; Published by Prasaranga, University of Mysore, Manasa Gangotri, Mysore-6. Pages Demy 274, Price Rs. 20-00.

ವಿಶಿಷ್ಟಾದ್ವೈತಸಿದ್ಧಾಂತಗ್ರಂಥವಾದ ವೇದಾರ್ಥಸಂಗ್ರಹ, ದ್ವೈತಸಿದ್ಧಾಂತಗ್ರಂಥವಾದ ವಿಷ್ಣುತತ್ತ್ವವಿನಿರ್ಣಯ- ಇವುಗಳನ್ನು ಆಂಗ್ಲಭಾಷೆಗೆ ಅನುವಾದಿಸಿರುವ ಈ ಮಹನೀಯರು ಅದ್ವೈತವೇದಾಂತಗ್ರಂಥವಾದ ನೈಷ್ಕರ್ಮ್ಯಸಿದ್ಧಿಯನ್ನೂ ಅನುವಾದಮಾಡಿ ತತ್ತ್ವಶಾಸ್ತ್ರದ ವಿದ್ಯಾರ್ಥಿಗಳಿಗೆ ಉಪಕಾರಮಾಡಿರುತ್ತಾರೆ. ಈ ಗ್ರಂಥಕ್ಕೆ ಸ್ವಾಮಿ ಆದಿದೇವಾನಂದರು ಮುನ್ನುಡಿಯನ್ನು ಬರೆದಿದ್ದಾರೆ. ಇಂಗ್ಲಿಷ್ ಬಲ್ಲ ಜಿಜ್ಞಾಸುಗಳು ಓದಬೇಕಾದ ಗ್ರಂಥವಿದು.

# ಜೀವಾತ್ಮನ ಅವಸ್ಥಾಭೇದಗಳು-೨

ಹಿಂದಿನ ಲೇಖನದಲ್ಲಿ ಜೀವಾತ್ಮನಿಗೆ ಸಂಭವಿಸುವ ಸ್ವಪ್ನಾವಸ್ಥೆಯನ್ನು ವಿಚಾರಕ್ಕೆ ತೆಗೆದುಕೊಳ್ಳಲಾಗಿದೆ. ಸ್ವಪ್ನವು ಮಾಯಾಮಾತ್ರವೇ ಎಂಬುದನ್ನೂ ಪ್ರತಿಪಾದಿಸಲು ಅಲ್ಲಿ ಪ್ರಯತ್ನಿಸಿದೆ. ಈ ವಿಚಾರಸರಣಿಯನ್ನು ಈಗ ಮುಂದು ವರಿಸಲಾಗುವದು. ಜೀವಾತ್ಮ ಅಥವಾ ಶಾರೀರನ ಮೀಮಾಂಸೆಯು ಕಟ್ಟಕಡೆಯಲ್ಲಿ ಆತ್ಮೈಕತ್ವವಿದ್ಯೆಯಲ್ಲಿ ಪೂರ್ಣಗೊಳ್ಳಲಿದೆ. ಆದರೆ ವಿಚಾರದಶೆಯಲ್ಲಿ ಲೋಕಾನುಭವಕ್ಕೆ ಅವಿರೋಧವಾಗಿಯೇ ಚರ್ಚಿಸಲಾಗುವದು. ಆದ್ದರಿಂದ ವ್ಯಾವಹಾರಿಕಪ್ರಪಂಚಾನುಭವದಂತೆ ಜೀವಾತ್ಮನು ಕನಸನ್ನು ಕಂಡು ಎಚ್ಚರವಾದ ಕೂಡಲೆ ಅದನ್ನು ಸುಳ್ಳೆಂದು ನಿರ್ಣಯಿಸುವನು. ಇದೇ ದೃಷ್ಟಿಯನ್ನೇ ಸೂತ್ರಕಾರರೂ ಸ್ವೀಕರಿಸಿ ಸ್ವಪ್ನವು ಮಾಯಾಮಾತ್ರವೆಂದು ಹಿಂದೆ ತಿಳಿಸಿದ್ದಾರೆ. ಈ ಸ್ವಪ್ನಾವಸ್ಥೆಯ ಪರೀಕ್ಷೆಯನ್ನೇ ಇನ್ನೂ ಕೆಲವು ಯುಕ್ತಿಗಳಿಂದ ಈಗ ಹಿಗ್ಗಿಸಿ ನೋಡೋಣ.

ಕೆಲವು ವೇಳೆ ಕನಸುಗಳು ಭವಿಷ್ಯದ ಆಗುಹೋಗುಗಳನ್ನೂ ಶುಭಾಶುಭಗಳನ್ನೂ ಸೂಚಿಸುವದೂ ಉಂಟು. ಆದ್ದರಿಂದ ಕನಸುಗಳನ್ನೆಲ್ಲ ಕೇವಲ ಮಾಯಾಮಾತ್ರವೆಂದು ಜರಿದದ್ದು ಸರಿಯೆ? ಎಂದರೆ ಹಾಗೇನಿಲ್ಲ- ಎಂದು ಸಿದ್ಧಾಂತವನ್ನು ತಿಳಿಸುತ್ತಾರೆ. ಕನಸುಗಳು ಮಾಯಾಮಾತ್ರವೆಂಬುದು ನಿಜವಾದರೂ ಅವು ಸೂಚಕಗಳಾಗುವವೆಂಬುದನ್ನೇನೂ ನಾವು ಅಲ್ಲಗಳೆಯುವದಿಲ್ಲ. ಏಕೆಂದರೆ ಶ್ರುತಿಯಲ್ಲಿಯೇ ಈ ವಿಚಾರವನ್ನು ಒಪ್ಪಿರುತ್ತದೆ. ಹೇಗೆಂದರೆ ಬ್ರಹ್ಮಚರ್ಯನಿಷ್ಠನಾಗಿ ಒಬ್ಬನು ಮಾಡಿರುವ ಸಾಮೋಪಾಸನೆಯಲ್ಲಿ ಅವನಿಗೆ ಸ್ತ್ರೀದರ್ಶನವಾದರೆ ಆ ಉಪಾಸನೆಯು ಸಮೃದ್ಧವಾಯಿತೆಂದು ತಿಳಿಯಬೇಕು- ಎಂದು ಶ್ರುತಿಯಲ್ಲಿದೆ. ಹಾಗೆಯೇ ಪುರಾಣಾದಿಗಳಲ್ಲಿಯೂ ಶುಭಾಶುಭಗಳನ್ನು ಸೂಚಿಸುವ ಸ್ವಪ್ನಗಳನ್ನು ವಿಂಗಡಿಸಿ ಫಲಗಳನ್ನು ಹೇಳಿರುತ್ತಾರೆ. ರಾಮಾಯಣದಲ್ಲಿ ಸುಂದರಕಾಂಡದಲ್ಲಿ ತ್ರಿಜಟೆ- ಎಂಬ ರಾಕ್ಷಸಿಗೆ ರಾವಣನ ವಿನಾಶವನ್ನೂ ರಾಮನ ವಿಜಯವನ್ನೂ ಸೂಚಿಸುವ ಸ್ವಪ್ನಗಳಾದುವೆಂದು ಬರೆದಿದೆ. ಈಗಲೂ ಎಷ್ಟೋ ಜನರು ಕನಸಿನಲ್ಲಿ ಗುರುಗಳು ಮಂತ್ರೋಪದೇಶಮಾಡಿದ್ದನ್ನೂ ಪ್ರಸಾದಾನುಗ್ರಹವನ್ನು ಮಾಡಿದ್ದನ್ನೂ ತಮ್ಮ ಅನುಭವಾನುಸಾರವಾಗಿ ಜನರ ಮುಂದಿಡುತ್ತಾರೆ. ಆದ್ದರಿಂದ ಇಂಥ ಲೋಕಾನುಭವವನ್ನೇನೂ ನಾವು ಅಲ್ಲಗಳೆಯುವದಿಲ್ಲ. ಅವುಗಳೆಲ್ಲ ವ್ಯವಹಾರದಲ್ಲಿ ಹಾಗೆಯೇ ಇದ್ದುಕೊಂಡಿರಲಿ. ಆದರೆ ಯಾರೇ ಆಗಲಿ ಸ್ವಪ್ನದಲ್ಲಿ ತಾವು ಅನುಭವಿಸಿದ್ದನ್ನು ಪರಾಮರ್ಶೆಮಾಡಿ ಎಚ್ಚರದಲ್ಲಿ ಹೇಳುತ್ತಾರೆಯೇ ಹೊರತು ತಾವು ಕಂಡ ಸ್ವಪ್ನವು ಬಾಧಿತವಾಗಲಿಲ್ಲ- ಎಂದೇನೂ ಹೇಳುವದಿಲ್ಲ. ಸ್ವಪ್ನವು ಬಾಧಿತವಾಗದೆ ಎಚ್ಚರವು ಉಂಟಾಗುವಂತೆಯೇ ಇಲ್ಲ. ಆದ್ದರಿಂದ ಸೂಚಕಸ್ವಪ್ನಗಳನ್ನು ವಿಶೇಷಾನುಭವವೆಂದು ಒಪ್ಪಬಹುದೇ ಹೊರತು ಮಾಯಾಮಾತ್ರವಲ್ಲ-ಎಂದು ಹೇಳಬರುವದಿಲ್ಲ.

ಹಾಗಾದರೆ ಎಚ್ಚರವು ಸತ್ಯವೆಂದೂ ಎಚ್ಚರದಲ್ಲಿ ಕಂಡುಬರುವ ಸೃಷ್ಟಿಯು ಪರಮಾರ್ಥವೆಂದೂ ಒಪ್ಪಬಹುದೆ? ಏಕೆಂದರೆ ಕನಸು ಎಚ್ಚರದಲ್ಲಿ ಬಾಧಿತವಾದಂತೆಯೇ ಎಚ್ಚರವು ಬೇರೆ ಯಾವ ಅವಸ್ಥೆಯಲ್ಲಿಯೂ ಬಾಧಿತವಾದಂತೆ ಕಾಣುವದಿಲ್ಲವಲ್ಲ? ಎಂದು ಆಕ್ಷೇಪಕನು ಕೇಳಬಹುದು. ಅದಕ್ಕೆ ಆಚಾರ್ಯರ ಉತ್ತರವಿದು. ಹಾಗೇನೂ ತಿಳಿಯಕೂಡದು. ಅವಸ್ಥೆಗಳು ಒಂದನ್ನೊಂದು ಬಾಧಿಸಿಯೇ ತೀರುತ್ತವೆ. ಏಕೆಂದರೆ ಎರಡವಸ್ಥೆಗಳು ಏಕಕಾಲದಲ್ಲಿ ಅನುಭವದಲ್ಲಿದ್ದುದು ಯಾರಿಗೂ ಸಂಭವಿಸಿಲ್ಲ. ಕನಸಿನ ಕಾಲಕ್ಕೆ ಅದೇ ಎಚ್ಚರವೆಂದು ತೋರುವದರಿಂದ ಈಗಿನ ಎಚ್ಚರವು ಆಗ ಹೇಳಹೆಸರಿಲ್ಲವಾಗಿರುತ್ತದೆ. ಇದು ಹಾಗಿರಲಿ. ವ್ಯವಹಾರಪ್ರಪಂಚದಲ್ಲಿದ್ದುಕೊಂಡೇ ನಾವು ಸೃಷ್ಟಿಯನ್ನು ವಿಚಾರಮಾಡಿದಾಗಲೂ ಅದು ಕಾರ್ಯಕಾರಣರೂಪದಿಂದ ಇದ್ದುಕೊಂಡಿರುವದರಿಂದ ಕಾರ್ಯವು ವಾಚಾರಂಭಣವೇ, ಅನೃತವೇ- ಕಾರಣವೆನಿಸಿದ್ದ ವಸ್ತುವೊಂದೇ ಪರಮಾರ್ಥವು- ಎಂದು ಸೂತ್ರಕಾರರು ಆರಂಭಣಾಧಿಕರಣದಲ್ಲಿ ಈ ಮುಂಚೆಯೇ ಶ್ರುತ್ಯನುಗುಣವಾಗಿ ತಿಳಿಸಿದ್ದಾರೆ. ಆದ್ದರಿಂದ ಆಕಾಶಾದಿಮಹಾಭೂತಗಳ ಸೃಷ್ಟಿಯೂ ಪರಮಾರ್ಥವಲ್ಲವೇ ಅಲ್ಲ. ಮತ್ತು ಅವು ಸತ್ಯವೂ ಅಲ್ಲ. ಹೀಗೆ ಎಚ್ಚರಕನಸುಗಳೆರಡರಲ್ಲಿಯೂ ತೋರಿಕೊಳ್ಳುವ ಕಾರ್ಯಕಾರಣ- ದೇಶಕಾಲಕ್ರಿಯಾಫಲಾತ್ಮಕವಾದ ದ್ವೈತಪ್ರಪಂಚವೆಲ್ಲವೂ ಮಾಯಾಮಾತ್ರವೇ- ಎಂಬಿದು ಪರಮಸಿದ್ಧಾಂತವಾಗಿದೆ. ಆದರೆ ಬ್ರಹ್ಮಾತ್ಮಜ್ಞಾನವುಂಟಾಗುವ ಮೊದಲು ಆಕಾಶಾದಿಪ್ರಪಂಚವು ಒಂದು ವ್ಯವಸ್ಥಿತರೂಪದಿಂದ ನಿಯತವಾಗಿ ತೋರಿಕೊಳ್ಳುವದರಿಂದ ವ್ಯಾವಹಾರಿಕವಾಗಿ ಸತ್ಯವೆಂದೂ ಅದರ ಅಪೇಕ್ಷೆಯಿಂದ ಕನಸಿನ ಪ್ರಪಂಚವು ಪ್ರತಿದಿನವೂ ಬಾಧಿತವಾಗುವದರಿಂದ ಮಾಯಾಮಾತ್ರವೆಂದೂ ವಿಶೇಷವಾಗಿ ಇಲ್ಲಿ ಹೇಳಿದೆ.

ಇನ್ನು ಜೀವನು ಪರಮೇಶ್ವರನ ಅಂಶವೆಂದೇ ಶ್ರುತಿಯಲ್ಲಿ ಹೇಳಿರುವದರಿಂದ ಪರಮೇಶ್ವರನಿಗೆ ಸಮಾನವಾಗಿರುವ ಜ್ಞಾನಶಕ್ತ್ಯೈಶ್ವರ್ಯಗಳೇ ಜೀವನಿಗೂ ಇರಬೇಕಲ್ಲವೆ? ದೊಡ್ಡ ಕೆಂಡದಿಂದ ಸಿಡಿದುಬಂದ ಕಿಡಿಯು ಕೆಂಡದಂತೆಯೇ ಸುಡುತ್ತದೆಯಲ್ಲವೆ? ಹಾಗೆಯೇ ಜೀವನಿಗೂ ಈಶ್ವರನಂತೆ ಪರಮೈಶ್ವರ್ಯವು ಇರಬೇಕು. ಅದರ ಬಲದಿಂದ ಅವನು ಕನಸಿನಲ್ಲಿ ಸಂಕಲ್ಪಮಾತ್ರದಿಂದ ರಥಾದಿಗಳ ಸೃಷ್ಟಿಯನ್ನೂ ಮಾಡಬಹುದಾಗಿದೆ. ಹೀಗಿರುವಲ್ಲಿ ಜೀವನ ಕನಸಿನ ಸೃಷ್ಟಿಯಾದರೂ ಏಕೆ ಮಾಯಾಮಾತ್ರವಾಗಬೇಕು? ಎಂದು ಆಕ್ಷೇಪಕನು ಕೇಳಬಹುದಾಗಿದೆ. ಇದಕ್ಕೆ ಸೂತ್ರಕಾರರ ಉತ್ತರವೇನೆಂದರೆ: ನಿಜ. ಜೀವನು ಜ್ಞಾನೈಶ್ವರ್ಯಸಂಪನ್ನನಲ್ಲ- ಎಂದೇನೂ ನಾವು ಹೇಳುವದಿಲ್ಲ. ಆದರೆ ಅವನಿಗೆ ಜೀವತ್ವದಶೆಯಲ್ಲಿ ಆ ಗುಣಗಳು ಮುಚ್ಚಿಹೋಗಿರುತ್ತವೆ. ಆದ್ದರಿಂದ ಜೀವನು ತನ್ನ ಪರಮಸ್ವರೂಪನಾದ ಭಗವಂತನನ್ನು ಧ್ಯಾನಮಾಡಿ ಆವರಣವನ್ನು ನಾಶಗೊಳಿಸಿಕೊಳ್ಳಬೇಕು. ಏಕೆಂದರೆ ಜೀವನಿಗೆ ಬಂಧಮೋಕ್ಷಗಳು ಈಶ್ವರನೆಂಬ ಹೇತುವಿನ ಮೂಲಕವೇ ಸಂಭವಿಸಬೇಕಾಗಿದೆ- ಎಂದು ತಿಳಿಸಿದ್ದಾರೆ. ಇದರ ಅಭಿಪ್ರಾಯ

ವೇನೆಂದರೆ: ಜೀವೇಶ್ವರಭೇದವು ವ್ಯವಹಾರದಲ್ಲಿ ಕಂಡುಬರುತ್ತಿರುವವರೆಗೂ ಆ ಸ್ಥಿತಿಯಿಂದ ಇಬ್ಬರನ್ನೂ ಸರಿಸಮಾನರೆನ್ನಲಾಗುವದಿಲ್ಲ. ಏಕೆಂದರೆ ಜೀವನ ಶಕ್ತಿಬಲಾದಿಗಳು ಅವಿದ್ಯಾವಶದಿಂದ ಸಂಕೋಚವಾಗಿರುವವು. ಆದ್ದರಿಂದ ಶಕ್ತಿಯಿದ್ದರೂ ಕಾರ್ಯಸಮರ್ಥವಾಗಿರುವದಿಲ್ಲ. ಹೇಗೆ ಕಣ್ಣಿಗೆ ನೋಡತಕ್ಕ ಶಕ್ತಿಯಿದ್ದರೂ ಪರೆಯು ಅಡ್ಡಲಾದಾಗ ಆ ಶಕ್ತಿಯು ಪ್ರತಿಬದ್ಧವಾಗಿರುವದೋ, ಅನಂತರ ಔಷಧಾದಿಗಳ ಪ್ರಯೋಗದಿಂದ ಪರೆಯು ನಾಶವಾಗಲಾಗಿ ದೃಕ್‌ಶಕ್ತಿಯು ಹೊರತೋರಿಕೊಳ್ಳುವದೋ ಹಾಗೆಯೇ ಜೀವನಲ್ಲಿದ್ದರೂ ಮರೆಯಾಗಿರುವ ಜ್ಞಾನೈಶ್ವರ್ಯಶಕ್ತಿಗಳು ಈಶ್ವರನನ್ನೇ ಚಿಂತಿಸಿದ್ದರಿಂದ ಅವನ ಪ್ರಸಾದ ಬಲದಿಂದ ಹೊರತೋರಲಾಗಿ ಜೀವನು ಪರಮೇಶ್ವರನೇ ಆಗಿಬಿಡುವನು. ಆಗ ಪರಮೇಶ್ವರನ ಜ್ಞಾನವು ಇವನ ಮುಕ್ತಿಗೂ ಅಜ್ಞಾನವು ಬಂಧನಕ್ಕೂ ಕಾರಣವೆಂದಾಗುವದು; ಇದು ವ್ಯವಹಾರದಲ್ಲಿ ಸಾಧುವೂ ಆಗಿರುವದು. ಶ್ರುತಿಯೂ ಕೂಡ "ದೇವನನ್ನು ಅರಿತುಕೊಳ್ಳುವದರಿಂದ ಎಲ್ಲಾ ಸಂಸಾರಪಾಶಗಳೂ ನಾಶವಾಗುವವು" ಎಂದೇ ತಿಳಿಸುತ್ತಿದೆ.

ಈಗ ಪ್ರಕೃತವಿಚಾರಕ್ಕೆ ಬರೋಣ. ಜೀವಾತ್ಮನ ಅವಸ್ಥಾಭೇದಗಳ ಮೀಮಾಂಸೆಯಿಂದ ಅವನು ಚೈತನ್ಯರೂಪದಿಂದ ಪರಮೇಶ್ವರನೇ ಎಂಬಿದೂ ಉಪಾಧಿರೂಪದಿಂದ ಅಸ್ವತಂತ್ರನೂ ಬದ್ಧನೂ ಅಲ್ಪನೂ ಆಗಿದ್ದಾನೆಂಬುದೂ ಗೊತ್ತಾಗುತ್ತದೆ. ಎಲ್ಲಾ ಜೀವರುಗಳೂ ತಮ್ಮತಮ್ಮ ಸ್ವರೂಪಜ್ಞಾನದ ಅಭಾವದಿಂದಲೇ ಸಂಸಾರಿಗಳಾಗಿರುತ್ತಾರೆ. ಇವರುಗಳಲ್ಲಿ ಯಾವ ಜೀವನು ಪುಣ್ಯವಿಶೇಷದಿಂದ ಸದ್ಗುರುವನ್ನು ಬಳಿಸಾರಿ ವಿಚಾರಮಾಡಿ ಬ್ರಹ್ಮೋಪದೇಶವನ್ನು ಹೊಂದಿ ಆ ಪರತತ್ತ್ವವನ್ನೇ ಅನುಸಂಧಾನಮಾಡುವ ಮೂಲಕ ತನ್ನ ಅಲ್ಪತ್ವಾದಿಗಳನ್ನು ಕಳಚಿಕೊಳ್ಳುವನೋ ಅವನು ಆಪ್ತಕಾಮನೂ ವಿಶ್ವೈಶ್ವರ್ಯಸಂಪನ್ನನೂ ಆಗಿ ಮುಕ್ತನಾಗುವನು. ಹೀಗೆ ಮುಕ್ತಿಯನ್ನು ಜ್ಞಾನದಿಂದಲೂ ಯೋಗದಿಂದಲೂ ಸಾಧಿಸಬೇಕಾಗಿದೆ. ಇಲ್ಲಿ ಜ್ಞಾನವೆಂದರೆ ಶಾಸ್ತ್ರಜ್ಞಾನವೆಂದೂ ಯೋಗವೆಂದರೆ ಅನುಭವಪರ್ಯಂತವಾದ ಅನುಷ್ಠಾನವೆಂದೂ ತಿಳಿಯಬೇಕು. ಬೆಂಕಿಯು ಸುಡುವ ಹಾಗೂ ಬೆಳಗುವ ಸ್ವಭಾವದ್ದೇ ಆದರೂ ಬೂದಿಯು ಮುಚ್ಚಿದಾಗ ಹೇಗೆ ಅದು ತನ್ನ ಕೆಲಸವನ್ನು ಮಾಡುವದಿಲ್ಲವೋ ಹಾಗೆ ಜೀವನಿಗೂ ದೇಹೇಂದ್ರಿಯಮನೋಬುದ್ಧಿವಿಷಯಗಳಲ್ಲಿ ಆತ್ಮಬುದ್ಧಿಯುಂಟಾಗಿರುವದೇ ಜ್ಞಾನೈಶ್ವರ್ಯಗಳ ತಿರೋಭಾವಕ್ಕೆ ಕಾರಣವೆಂದು ತಿಳಿಯಬೇಕು. ಈ ತಿರೋಭಾವವನ್ನು ಹೋಗಲಾಡಿಸಿಕೊಳ್ಳುವದು ಆಯಾ ಜೀವನ ಜವಾಬ್ದಾರಿಯಾಗಿರುತ್ತದೆ. ಆದ್ದರಿಂದ ಜೀವನಿಗೆ ಸಂಭವಿಸುತ್ತಿರುವ ಅವಸ್ಥಾಭೇದಗಳೇ ಅವನು ಪರಮಾರ್ಥವಾಗಿ ಸಂಸಾರಿಯಲ್ಲವೆಂಬುದನ್ನು ಸ್ಪಷ್ಟಗೊಳಿಸುತ್ತಿವೆ. ಅವಸ್ಥಾಜಿಜ್ಞಾಸೆಗೆ ಇದೇ ಫಲವು.

—— ——

# ಸರಸ್ವತೀಸೂಕ್ತ-೫

( ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು )

ಸರಸ್ವತೀಸೂಕ್ತದ ೧೧ನೆಯ ಋಕ್ಕನ್ನು ಈಗ ವಿಚಾರಮಾಡೋಣ.

**ಓಂ ॥ ಆಪಪ್ರುಷೀ ಪಾರ್ಥಿವಾನ್ಯುರುರಜೋ ಅಂತರಿಕ್ಷಮ್ ।**
**ಸರಸ್ವತೀ ನಿದಸ್ಪಾತು ।೧೧॥**

ಈ ಮಂತ್ರವು ಸರಸ್ವತೀದೇವಿಯನ್ನೇ ಕುರಿತದ್ದಾಗಿದೆ. ದೇವಿಯು ಅಪರಿಮಿತ ತೇಜಃಸಂಪನ್ನಳು. ಆದ್ದರಿಂದ ಆಕೆಯು ಭೂಮಿಯ ಸಂಬಂಧವಾದ ಎಲ್ಲಾ ಲೋಕಗಳನ್ನೂ ಹಾಗೂ ಅಂತರಿಕ್ಷವನ್ನೂ ತನ್ನ ಬೆಳಕಿನಿಂದ ತುಂಬಿರುವಳು. ಇಂಥ ದೇವಿಯು ನಮ್ಮನ್ನು ನಿಂದಕರಾದ ಶತ್ರುಗಳ ಕಡೆಯಿಂದ ಕಾಪಾಡಲಿ ! ಎಂದಭಿಪ್ರಾಯ. ಇಲ್ಲಿ ಲೋಕಗಳೆಂದರೆ.ಪ್ರಾಣಿಗಳೆಂದು ತಿಳಿಯಬೇಕು. ಮನುಷ್ಯರಿಂದಾರಂಭಿಸಿ ಎರಡು ಕಾಲಿನ, ನಾಲ್ಕು ಕಾಲಿನ ಎಲ್ಲಾ ಜೀವಿಗಳೂ ಸರಸ್ವತಿಯ ತೇಜಸ್ಸಿನಿಂದ ತುಂಬಿದವರಾಗಿದ್ದಾರೆ. ಹೇಗೆಂದರೆ ದೇವಿಯು ವಾಗ್ರೂಪದಿಂದ ಎಲ್ಲಾ ಪ್ರಾಣಿಗಳನ್ನೂ ಅನುಗ್ರಹಿಸಿರುತ್ತಾಳೆ. ಮನುಷ್ಯರು ಭಾಷಾಸರಸ್ವತಿಯನ್ನು ಆಶ್ರಯಿಸಿದ್ದಾರೆ. ಪ್ರಾಣಿಗಳು ಧ್ವನಿರೂಪವಾದ ಸರಸ್ವತಿಯನ್ನಾಶ್ರಯಿಸಿರುತ್ತವೆ. ಪ್ರತಿಯೊಂದು ಪ್ರಾಣಿಯೂ ತನ್ನದೇ ಆದ ವಿಶಿಷ್ಟಧ್ವನಿಯಿಂದ ಕೂಗುತ್ತದೆ. ತನ್ನ ಕ್ಷೇತ್ರಕ್ಕೆ ಒಳಪಟ್ಟ ವ್ಯವಹಾರವನ್ನೂ ಸಾಗಿಸುತ್ತದೆ. ಮನುಷ್ಯರು ಭಾಷಾಸರಸ್ವತಿಯನ್ನು ಮಾತಿನ ರೂಪದಲ್ಲಿಯೂ ಬರಹರೂಪದಲ್ಲಿಯೂ ಬಳಸಿಕೊಳ್ಳುತ್ತಾರೆ. ಪ್ರಪಂಚದಲ್ಲಿ ಅನೇಕಭಾಷೆಗಳಿವೆ. ಲಿಪಿಗಳಿವೆ. ಆಯಾ ಭಾಷೆಗೇ ವಿಶಿಷ್ಟವಾದ ಸಾಹಿತ್ಯವಿದೆ. ಜ್ಞಾನರಾಶಿಯೆಲ್ಲ ಈ ಸರಸ್ವತೀರೂಪದಲ್ಲಿ ಮೈದೋರಿರುತ್ತದೆ. ಆದ್ದರಿಂದ ಜನರು ಭಾಷಾರೂಪದಿಂದ ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸಲು ಸಮರ್ಥರಾಗಿದ್ದಾರೆ. ಈ ವಾಕ್‌ಪ್ರಪಂಚವು ಎಂದರೆ ಸಾಹಿತ್ಯವಾಙ್ಮಯವು ಇಲ್ಲವಾಗಿದ್ದರೆ ಜಗತ್ತೆಲ್ಲವೂ ಅಂಧಕಾರದಲ್ಲಿ ಮುಳುಗಿಬಿಡುತ್ತಿತ್ತು- ಎಂದರೆ ಅತಿಶಯೋಕ್ತಿಯೇನಲ್ಲ. ಆದರೆ ಈ ವಾಙ್ಮಯವೆಲ್ಲವೂ ಸರಸ್ವತಿಯ ತೇಜಸ್ಸೇ, ಆಕೆಯ ವಿಭೂತಿಯೇ- ಎಂಬಿದನ್ನು ಅಜ್ಞಾನಿಗಳು ಅರಿಯರು. ಅರಿತಾಗ ಎಲ್ಲವೂ ದೇವಿಯ ಆವಿರ್ಭಾವವೆಂದು ತಿಳಿದುಬಿಡುವದರಿಂದ ನಮ್ಮ ಭಾಷೆ ಹೆಚ್ಚಿನದು, ನಮ್ಮ ಸಂಸ್ಕೃತಿಯು ಹೆಚ್ಚಿನದು- ಎಂಬ ದುರಭಿಮಾನವು ಇಲ್ಲವಾಗುವದು. ಈಗಿನ ಕಾಲಕ್ಕೆ ನಾವೆಲ್ಲರೂ ಒಬ್ಬಳೇ ಶಾರದೆಯ ಮಕ್ಕಳು- ಎಂಬ ಭಾವನೆಯು ಬೆಳೆಯಬೇಕಾಗಿದೆ. ಇಲ್ಲವಾದರೆ ನಮ್ಮ ಚಿಂತನೆಗಳೆಲ್ಲ ಪರಸ್ಪರ ದೋಷಾರೋಪಣೆಯಲ್ಲಿಯೇ ಪರ್ಯವಸಾನವಾಗಿಬಿಡುವವು. ಆದ್ದರಿಂದ ಸರಸ್ವತಿಯನ್ನು ವಿಶ್ವತೋಮುಖವಾದ ಪ್ರತಿಭೆಯುಳ್ಳವಳೆಂದು ವಿಶಾಲಮನೋಭಾವದಿಂದ ಅರಿತು ಆರಾಧಿಸಬೇಕು. ಮಾನವನು ಸಾಧ್ಯವಾದರೆ ಸರಸ್ವತಿಯ ಎಲ್ಲಾ ಮುಖ

ಗಳನ್ನೂ ಪರಿಚಯಮಾಡಿಕೊಳ್ಳಬೇಕು. ಆಗ ಆಕೆಯ ಪ್ರಸಾದದಿಂದ ನಮ್ಮಲ್ಲಿ ಅಡಗಿರುವ ಸಂಕುಚಿತಭಾವನೆಗಳೆಂಬ ಶತ್ರುಗಳು ನಾಶವಾಗುವರು. ಪರಸ್ಪರವಾಗಿ ನಿಂದಿಸುವಂಥ ಸನ್ನಿವೇಶಗಳೂ ಮಾಯವಾಗುವವು. ದೇವಿಯು ಹಾಗೆ ಕರುಣಿಸಲಿ –ಎಂದು ಇಲ್ಲಿ ಸ್ತುತಿಸಲಾಗಿದೆ.

ಈಗ ೧೨ನೆಯ ಮಂತ್ರವನ್ನು ವಿಚಾರಮಾಡೋಣ.

**ಓಂ ॥ ತ್ರಿಷಧಸ್ಥಾ ಸಪ್ತಧಾತುಃ ಪಂಚಜಾತಾ ವರ್ಧಯಂತೀ ।**
**ವಾಜೇ ವಾಜೇ ಹವ್ಯಾಭೂತ್ ॥**

ಈ ಮಂತ್ರದಲ್ಲಿಯೂ ದೇವತೆಯಾದ ಸರಸ್ವತಿಯನ್ನೇ ಸ್ತುತಿಸಲಾಗಿದೆ. ಈಕೆಯು ತ್ರಿಷಧಸ್ಥಾ–ಎಂದರೆ ಮೂರು ಲೋಕಗಳಲ್ಲಿಯೂ ಇದ್ದುಕೊಂಡಿರುವಳು. ಸಪ್ತಧಾತುಃ– ಎಂದರೆ ಗಾಯತ್ರ್ಯಾದಿ ಏಳು ಛಂದಸ್ಸುಗಳುಳ್ಳವಳು. ಅಥವಾ ನದೀಪರವಾಗಿ ಅರ್ಥಮಾಡಿದರೆ ಗಂಗಾದಿನದಿಗಳೆಂಬ ಸ್ನೇಹಿತೆಯರುಳ್ಳವಳು– ಎಂದರ್ಥ. ಪಂಚಜಾತಳೆಂದರೆ ಬ್ರಾಹ್ಮಣಾದಿ ನಾಲ್ಕು ವರ್ಣದವರನ್ನೂ ನಿಷಾದ ಪಂಚಮರನ್ನೂ ವರ್ಧಯಂತೀ– ಬೆಳಸುವವಳು, ಅಭಿವೃದ್ಧಿಗೊಳಿಸುವವಳು– ಎಂದರ್ಥ. ಇಂಥ ದೇವಿಯು ವಾಜೇ–ಎಂದರೆ ಯುದ್ಧದಲ್ಲಿ, ನಮಗೆ ಹವ್ಯಾಭೂತ್ –ಆರಾಧಿಸಲ್ಪಡುವವಳಾಗಲಿ– ಎಂದರ್ಥ. ಸರಸ್ವತಿಯು ಮಹಾಬಲಿಷ್ಠಳೂ ಶುಂಭಾದಿರಾಕ್ಷಸರನ್ನು ಸಂಹರಿಸಿದವಳೂ ಆಗಿರುವದರಿಂದ ರಾಜರುಗಳು ಯುದ್ಧ ಕಾಲದಲ್ಲಿ ಈಕೆಯನ್ನು ಪೂಜಿಸಿ ಅನುಗ್ರಹಸಂಪಾದನೆಮಾಡಿಕೊಳ್ಳುತ್ತಿದ್ದರು. ಆದ್ದರಿಂದ ಋಷಿಯು ಹೀಗೆ ಸ್ತುತಿಸಿರುತ್ತಾನೆ.

ಈಗ ೧೩ನೆಯ ಮಂತ್ರವನ್ನು ವಿಚಾರಮಾಡೋಣ.

**ಓಂ॥ ಪ್ರ ಯಾ ಮಹಿಮ್ನಾ ಮಹಿನಾಸು ಚೇಕಿತೇ ದ್ಯುಮ್ನೇಭಿರನ್ಯಾ**
**ಅಪಸಾಮಪಸ್ತಮಾ । ರಥ ಇವ ಬೃಹತೀ ವಿಭ್ವನೇ**
**ಕೃತೋಪಸ್ತುತ್ಯಾ ಚಿಕಿತುಷಾ ಸರಸ್ವತೀ ॥೧೩॥**

ಈ ಮಂತ್ರದಲ್ಲಿ ಮತ್ತೆ ನದೀರೂಪಳಾದ ಸರಸ್ವತಿಯನ್ನು ಸ್ತೋತ್ರಮಾಡಿದೆ. ಈ ನದೀಮಾತೆಯು ತನ್ನ ಮಾಹಾತ್ಮ್ಯೆಯಿಂದಲೂ ಪ್ರಕಾಶಮಾನವಾದ ಕೀರ್ತಿ ಯಿಂದಲೂ ಕೂಡಿದವಳಾಗಿ ಉಳಿದ ನದೀದೇವತೆಯರ ನಡುವೆ ಪ್ರ–ಚೇಕಿತೇ– ಎಂದರೆ ಚೆನ್ನಾಗಿ ತಿಳಿದುಬರುತ್ತಿರುವಳು. ಮತ್ತು ಅಪಸಾಂ– ವೇಗವತಿಯರಲ್ಲಿ ಅಪಸ್ತಮಾ– ಹೆಚ್ಚಿನ ವೇಗವುಳ್ಳವಳಾಗಿಯೂ ಇರುವಳು. ಹೆಚ್ಚು ವೇಗಕ್ಕೆ ಪ್ರಸಿದ್ಧವಾದದ್ದು ರಥವು. ದೊಡ್ಡ ರಥವು ಎಂದರೆ ಮಹಾರಥವು ಹೇಗೆ ವೇಗ ವುಳ್ಳದ್ದೋ ಅಂಥ ವೇಗವತಿಯು ಈ ನದೀದೇವತೆಯಾಗಿರುವಳು. ಮತ್ತು ಸೃಷ್ಟಿ ಕರ್ತನಾದ ಪ್ರಜಾಪತಿಯಿಂದ ಅನೇಕ ಗುಣಸಂಪನ್ನಳಾಗಿ ಈಕೆಯು ನಿರ್ಮಿಸಲ್ಪಟ್ಟಿರು ವಳು. ಇಂಥ ದೇವಿಯು ಚಿಕಿತುಷಾ– ಮಹಿಮೆಯನ್ನು ಬಲ್ಲಾತನಿಂದ, ಉಪ ಸ್ತುತ್ಯಾ– ಸ್ತೋತ್ರಮಾಡಲ್ಪಡುತ್ತಿರುವಳು– ಎಂದಭಿಪ್ರಾಯ.

ಈಗ ೧೪ನೆಯ ಮಂತ್ರವನ್ನು ವಿಚಾರಮಾಡೋಣ.

**ಓಂ ॥ ಸರಸ್ವತ್ಯಭಿ ನೋ ನೇಷಿ ವಸ್ಯೋ ಮಾ ಪಸ್ಫರೀಃ ಪಯಸಾ ಮಾ ನ ಆಧಕ್ । ಜುಷಸ್ವ ನಃ ಸಖ್ಯಾ ವೇಶ್ಯಾ ಚ ಮಾ ತ್ವತ್ ಕ್ಷೇತ್ರಾಣ್ಯರಣಾನಿ ಗನ್ಮ ।೧೪॥**

ಈ ಮಂತ್ರದಲ್ಲಿ ಮತ್ತೆ ನದೀಸರಸ್ವತೀದೇವಿಯನ್ನು ಪ್ರಾರ್ಥಿಸಲಾಗಿದೆ. 'ಎಲೈ ಸರಸ್ವತಿಯೆ, ನಮ್ಮನ್ನು ವಸ್ಯರನ್ನಾಗಿ ಎಂದರೆ ಪ್ರಶಸ್ತವಾದ ಧನ-ಐಶ್ವರ್ಯಗಳಿಂದ ಕೂಡಿದವರನ್ನಾಗಿ ಮಾಡುವವಳಾಗು. ಮಾ ಪಸ್ಫರೀಃ— ಎಂದರೆ ಅಪ್ರವೃದ್ಧರನ್ನಾಗಿ ಮಾಡಬೇಡ. ನಾವು ಪುರೋಭಿವೃದ್ಧಿಯನ್ನು ಹೊಂದದ ಹಾಗೆ ಮಾಡಬೇಡ- ಎಂದರ್ಥ. ಮತ್ತು ಪಯಸ್ಸಿನಿಂದ— ನೀರಿನಿಂದ, ಮಾ ಆಧಕ್— ಬಾಧಿಸುವವಳಾಗಬೇಡ. ಹಾಗೂ ನಮ್ಮನ್ನು ಸ್ನೇಹಕರ್ಮದಿಂದ ಕೂಡುವವಳಾಗು— ಎಂದರೆ ಸ್ನೇಹಿತೆಯಂತೆ ಅನುಕೂಲಳಾಗಿ ನಮ್ಮೊಡನೆ ಸೇರುವವಳಾಗು. ಇದರಿಂದ ನಾವು ಅರಣವಾದ— ಎಂದರೆ ರಮಣೀಯವಲ್ಲದ ನಿಕೃಷ್ಟವಾದ ಕ್ಷೇತ್ರಗಳನ್ನು ಹೊಂದದೆ ಇರುವಂತಾಗಲಿ'— ಎಂದು ಋಷಿಯು ಪ್ರಾರ್ಥಿಸಿದ್ದಾನೆ. ನದೀರೂಪಳಾದ ದೇವಿಯು ಯಾವಾಗಲೂ ಜನರಿಗೆ ಪ್ರಿಯಳೇ ಆಗಿರುತ್ತಾಳೆ. ಆದರೂ ಅವಳ ಸ್ವಭಾವಕ್ಕನುಗುಣವಾಗಿ ಮಳೆಗಾಲದಲ್ಲಿ ಉಕ್ಕಿಹರಿಯುವದು, ಪ್ರವಾಹನಿಮಿತ್ತವಾಗಿ ಜನರು ತೊಂದರೆಪಡುವದು, ಪೈರುಗಳು ಜಲಾವೃತವಾಗಿ ನಷ್ಟವಾಗುವದು— ಹೀಗೆಲ್ಲ ತೊಂದರೆಗಳೂ ಸಂಭವಿಸುತ್ತವೆ. ಆದ್ದರಿಂದ ನದಿಯನ್ನು ಬಯಸಿದರೆ ಸಾಲದು. ನದೀ ಅಭಿಮಾನಿನಿಯಾದ ದೇವತೆಯನ್ನೂ ಆರಾಧನೆಮಾಡಿ ಆಕೆಯ ಸ್ಥೂಲಶರೀರವಾದ ಜಲವು ನಮಗೆ ಯಾವ ತೊಂದರೆಗಳನ್ನೂ ಉಂಟುಮಾಡದಂತೆಯೂ ಬೇಡಿಕೊಳ್ಳಬೇಕು. ಈಗಿನ ಬಹಿರ್ದೃಷ್ಟಿಯ ಜನರಿಗೆ ಈ ವಿಚಾರವೇ ಹೊಳೆದಿರಲಾರದು. ಈಗಿನವರೆಲ್ಲರೂ ನದಿಗಳನ್ನು ಕೇವಲ ಅಚೇತನ ಸ್ವಭಾವದ ಪ್ರಕೃತಿಯೆಂದೇ ಭಾವಿಸಿದ್ದಾರೆ. ಆದ್ದರಿಂದಲೇ ಆಗಾಗ್ಗೆ ನದಿಯ ನಿಮಿತ್ತವಾಗಿಯೂ ನೀರಿನ ನಿಮಿತ್ತವಾಗಿಯೂ ಜಗಳಗಳು ಸಂಭವಿಸುತ್ತಿವೆ. ಅತಿವೃಷ್ಟಿಪ್ರವಾಹಗಳ ಹಾವಳಿಯೂ ಇದ್ದೇ ಇದೆ. ಆದರೆ ಋಷಿಯ ಅಂತರ್ದೃಷ್ಟಿಯ ಪ್ರಾರ್ಥನೆಯಂತೆ ನದೀದೇವಿಯು ಸೌಮ್ಯಳಾಗಿ, ಉಪಯೋಗಕರಳಾಗಿ, ಪೈರುಗಳಿಗೂ ಜನವಸತಿಗೂ ತೊಂದರೆಯಿಲ್ಲದಂತೆ ಹರಿಯುತ್ತಾ ಭೂಮಿಯನ್ನೆಲ್ಲ ಸಸ್ಯಸಮೃದ್ಧವಾಗಿ ಮಾಡಿ ನಮ್ಮನ್ನೆಲ್ಲ ಧಾನ್ಯಸಮೃದ್ಧಿಯಿಂದ ಕಾಪಾಡಲಿ ; ನಮ್ಮ ಭೂಮಿಗಳೆಲ್ಲವೂ ಪೈರುಗಳಿಂದ ಕೂಡಿ ರಮಣೀಯವಾಗಿರಲಿ— ಎಂದು ತಿಳಿದು ಬರುತ್ತಿದೆ. ಇಂಥ ಪ್ರಾರ್ಥನೆಯು ಈಗಿನ ಕಾಲಕ್ಕೂ ಅವಶ್ಯವೇ ಆಗಿದೆ.

(ಸಶೇಷ)

——————

# ಉಪಸ್ಥಾನ-ವಂದನ-೨

(ಅಧ್ಯಾತ್ಮವಿದ್ಯಾಪ್ರವೀಣ ಶ್ರೀ ಕೆ.ಜಿ. ಸುಬ್ರಾಯಶರ್ಮರು, ಬೆಂಗಳೂರು)

ಕಳೆದ ಸಂಪುಟದ ಆಗಸ್ಟ್ ಸಂಚಿಕೆಯಲ್ಲಿ ಉಪಸ್ಥಾನಮಂತ್ರಗಳನ್ನು ಕುರಿತು ಬರೆದಿದ್ದೆನು. ಅಲ್ಲಿ ಸೂಚಿಸಿದ್ದಂತೆ ಈಗ ಸಾಯಂಸಂಧ್ಯೆಯಲ್ಲಿ ಯಜುರ್ವೇದಿಗಳು ಬಳಸುವ ಮಂತ್ರಾರ್ಥವನ್ನು ವಿಚಾರಮಾಡೋಣ. ಮಂತ್ರಗಳು ಹೀಗಿವೆ :-

**ಓಂ ॥ ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಡಯ ।**
**ತ್ವಾಮವಸ್ಯುರಾಚಕೇ ॥೧॥**

ಹಿಂದಿನಕಾಲದಲ್ಲಿ ಶುನಃಶೇಫನೆಂಬ ಒಬ್ಬ ಋಷಿಯಿದ್ದನು. ಅವನಿಗೆ ಯಜ್ಞ ಪಶುವಾಗಿ ಯೂಪಸ್ತಂಭದಲ್ಲಿ ಬಂಧನವು ಒಮ್ಮೆ ಪ್ರಾಪ್ತವಾಗಿಬಿಟ್ಟಿತು. ಆದರಿಂದ ಬಿಡುಗಡೆಯಾಗುವದಕ್ಕಾಗಿಯೂ ದೀರ್ಘಾಯುಷ್ಯಪ್ರಾಪ್ತಿಗಾಗಿಯೂ ಅವನು ವರುಣದೇವತೆಯನ್ನು ಕುರಿತು ಈ ಮಂತ್ರಗಳಿಂದ ಸ್ತೋತ್ರಮಾಡಿದನು. ವರುಣನು ಪ್ರಸನ್ನನಾಗಿ ಅವನನ್ನು ಬಂಧನದಿಂದ ಬಿಡುಗಡೆಮಾಡಿದ್ದಲ್ಲದೆ ದೀರ್ಘಾಯುಷ್ಯವನ್ನೂ ಅನುಗ್ರಹಿಸಿದನು. ಈ ಋಷಿಯು ಕಂಡುಕೊಂಡ ಮಂತ್ರಗಳೇ ಇಲ್ಲಿ ವಿವರಿಸಲ್ಪಡುತ್ತವೆ. ಸಂಜೆಯ ವೇಳೆಯಲ್ಲಿ ಸಂಧ್ಯಾವಂದನೆಯ ಅಂಗವಾಗಿ ವರುಣನ ಪ್ರಾರ್ಥನೆಯನ್ನು ಮಾಡುವಂತೆ ಋಷಿಗಳು ತಿಳಿಸಿದ್ದಾರೆ. ಮಿತ್ರ, ವರುಣ- ಮುಂತಾದ ದೇವತೆಗಳೆಲ್ಲರೂ ಸಂಧ್ಯಾಕಾಲದಲ್ಲಿ ಆರಾಧಿಸಲ್ಪಡುವವ ರಾಗಿರುತ್ತಾರೆ. ಈಗ ವರುಣನ ಸ್ತುತಿಯನ್ನು ವಿಚಾರಮಾಡೋಣ : ಋಷಿಯು ಹೀಗೆನ್ನುತ್ತಿದ್ದಾನೆ : ಎಲೈ ವರುಣನೆ, **ಇಮಂ ಮೇ**-ಈ ನನ್ನ, **ಹವಂ**-ಆಹ್ವಾನವನ್ನು **ಶ್ರುಧಿ**- ಕೇಳುವವನಾಗು- ಎಂದರೆ ನಾನು ಮಾಡುತ್ತಿರುವ ಪ್ರಾರ್ಥನಾರೂಪವಾದ ಆಹ್ವಾನವನ್ನು ಮನ್ನಿಸುವವನಾಗು. ಮತ್ತು ಈಗಲೆ ನನ್ನನ್ನು **ಮೃಡಯ**- ಸುಖಗೊಳಿಸುವವನಾಗು. **ಅವಸ್ಯುಃ**- ನಿನ್ನಿಂದ ಕಾಪಾಡಲ್ಪಡಲು ಬಯಸುತ್ತಿರುವ ನಾನು, ನಿನ್ನನ್ನು **ಆಚಕೇ**- ಬೇಡಿಕೊಳ್ಳುತ್ತಿರುವೆನು- ಎಂದು ಅಭಿಪ್ರಾಯ.

**ಓಂ ॥ ತತ್ತ್ವಾ ಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ**
**ಯಜಮಾನೋ ಹವಿರ್ಭಿಃ । ಅಹೇಡಮಾನೋ ವರುಣೇಹ**
**ಬೋಧ್ಯುರುಶಂಸ ಮಾ ನ ಆಯುಃ ಪ್ರಮೋಷೀಃ ॥೨॥**

ಆ ನಿನ್ನನ್ನು **ಬ್ರಹ್ಮಣಾ**- ಸ್ತುತಿರೂಪವಾದ ಮಂತ್ರದಿಂದ, **ವಂದಮಾನಃ**-ನಮಸ್ಕರಿಸುತ್ತಾ, **ಯಾಮಿ**-ಶರಣಾಗತನಾಗಿ ಬಂದಿರುವೆನು. ಆದ್ದರಿಂದ ನಿನ್ನನ್ನು ಬಳಿಸಾರಿಬಂದಿರುವ ನನಗೆ ರಕ್ಷಣೆಯನ್ನು ನೀಡುವವನಾಗು. ಇಲ್ಲವಾದರೆ ಶರಣಾಗತಪರಿತ್ಯಾಗವೆಂಬ ಮಹಾದೋಷವು ಬಂದೀತು- ಎಂದು ಭಾವ. ಇದೇನೋ ಸರಿ. ಆದರೆ ಯಜ್ಞಮಾಡುತ್ತಿರುವ ಯಜಮಾನನಿಗೆ ಪಶುಸಮರ್ಪಣೆಮಾಡದೆ

ಇದ್ದಷ್ಟರಿಂದ ದೋಷವು ಬರುವದಲ್ಲ? ಅವನಿಗೆ ಶ್ರೇಯಸ್ಸಾಗಬೇಡವೆ? ಎಂದರೆ ನಿಜ. ಅವನನ್ನೂ ನೀನು ಕಾಪಾಡುವವನಾಗು. ಏಕೆಂದರೆ ಆ ಯಜಮಾನನು ಕೂಡ **ಹವಿರ್ಭಿಃ**- ನಿನಗಾಗಿ ಸಮರ್ಪಿಸುತ್ತಿರುವ ಆಜ್ಯಾದಿಹವಿಸ್ಸುಗಳಿಂದ, **ಆಶಾಸ್ತೇ**- ಪ್ರಾರ್ಥಿಸುತ್ತಿರುವವನು. ಆದ್ದರಿಂದ ನನ್ನನ್ನೂ ಯಜಮಾನನನ್ನೂ ಒಟ್ಟಿಗೆ ಕಾಪಾಡು. ಮತ್ತು ಎಲೈ ವರುಣನೆ, ನೀನು **ಅಹೇಡಮಾನಃ**-ಅನಾದರ ಮಾಡದೆ, **ಇಹ**- ಈ ಲೋಕದಲ್ಲಿ ನಾನು ಮಾಡುತ್ತಿರುವ ಪ್ರಾರ್ಥನೆಯನ್ನು **ಬೋಧಿ**- ತಿಳಿಯುವವನಾಗು. ಹಾಗೂ ಎಲೈ **ಉರುಶಂಸನೆ**- ಎಂದರೆ ಮಂತ್ರಗಳಿಂದ ಸ್ತುತಿಸಲ್ಪಡುವವನೆ, **ನಃ ಆಯುಃ**- ನಮ್ಮ ಜೀವಿತವನ್ನು, **ಮಾ ಪ್ರಮೋಷೀಃ**-ನಾಶಗೊಳಿಸಬೇಡ- ಎಂದರೆ ನಮಗೆ ವೇದೋಕ್ತವಾದ ಆಯುಷ್ಯವನ್ನು ಪೂರ್ಣವಾಗಿ ಅನುಗ್ರಹಿಸುವವನಾಗು- ಎಂದಭಿಪ್ರಾಯ. ಈ ಎರಡು ಮಂತ್ರಗಳನ್ನೂ ಯಜುರ್ವೇದಿಗಳು ಉಪನಯನ- ವಿವಾಹಸಂಸ್ಕಾರಗಳ ಪ್ರಧಾನ ಹೋಮಗಳಲ್ಲಿಯೂ ಬಳಸುತ್ತಾರೆ. ಉಳಿದ ಹೋಮಗಳಲ್ಲಿ ಅಗ್ನಿಮುಖವೆಂಬ ಕರ್ಮದ ಉತ್ತರಾಂಗದಲ್ಲಿ ಉಪಯೋಗಿಸುತ್ತಾರೆ. ಹೀಗೆ ಈ ಎರಡು ಮಂತ್ರಗಳು ವೈದಿಕರಿಗೆ ಸುಪ್ರಸಿದ್ಧವಾಗಿವೆ.

**ಓಂ ॥ ಯಚ್ಚಿದ್ಧಿ ತೇ ವಿಶೋ ಯಥಾ ಪ್ರ ದೇವ ವರುಣ ವ್ರತಮ್ ।**
**ಮಿನೀಮಸಿ ದ್ಯವಿ ದ್ಯವಿ ॥**

ಈ ಮಂತ್ರದಲ್ಲಿ ನಮ್ಮ ವ್ರತಲೋಪಾಪರಾಧವನ್ನು ಕ್ಷಮಿಸುವಂತೆ ವರುಣನಲ್ಲಿ ಪ್ರಾರ್ಥಿಸಲಾಗಿದೆ. ಎಲೈ ವರುಣನೆ, **ದೇವ-ತೇ**- ದೇವನಾಗಿರುವ ನಿನ್ನ **ಯಚ್ಚಿದ್ ವ್ರತಮ್**- ಯಾವ ಕರ್ಮಗಳಿವೆಯೋ, ಅವುಗಳನ್ನು **ದ್ಯವಿ ದ್ಯವಿ**- ದಿನದಿನವೂ **ಮಿನೀಮಸಿ**- ಊಹಿಸುತ್ತೇವೆ- ಎಂದು ಅಕ್ಷರಾರ್ಥವಾಗುವದು. ದೇವತೆಗಳಿಗೆ ಭಗವಂತನು ನೀಡಿರುವ ಅಧಿಕಾರದಲ್ಲಿ ಮನುಷ್ಯರ ಪಾಪಪುಣ್ಯಕರ್ಮಗಳನ್ನು ನೋಡಿ ಅದಕ್ಕೆ ತಕ್ಕಂತೆ ನಿಗ್ರಹಾನುಗ್ರಹಗಳನ್ನು ಮಾಡುವ ಕಾರ್ಯವೂ ಸೇರಿರುವದು. ವರುಣನು ರಾತ್ರಿವೇಳೆಯಲ್ಲಿ ಈ ಅಧಿಕಾರವನ್ನು ಹೊಂದಿದವನಾಗಿ ನಮ್ಮ ಕರ್ಮಗಳಿಗೆ ಸಾಕ್ಷಿಯಾಗಿರುವನು. ಭಗವಂತನ ಆದೇಶದಂತೆ ಅವನು ತನ್ನ ಕರ್ತವ್ಯವನ್ನು ನೆರವೇರಿಸಿಬಿಡುವನು. ಆದರೆ ಕರ್ಮಾಧಿಕಾರಿಗಳಾದ ನಾವು ಆಲಸ್ಯದಿಂದಲೊ, ಮರೆವಿನಿಂದಲೊ- ಕರ್ಮಗಳನ್ನು ಸಕಾಲದಲ್ಲಿ ಸರಿಯಾಗಿ ಮಾಡದೆ ತಪ್ಪುಗಳನ್ನು ಎಸಗುವೆವು. ಇದನ್ನರಿತ ಶುನಶ್ಶೇಫನು ಹೀಗೆನ್ನುತ್ತಿದಾನೆ. **ಯಥಾ ವಿಶಃ**- ಮನುಷ್ಯರು ಹೇಗೆಂದರೆ- ಎಂದು ಉದಾಹರಿಸಿ 'ಅವರು ತಪ್ಪುಗಳನ್ನು ಮಾಡುತ್ತಾರೆ; ಆದರೆ ನೀನು ಅವರ ಪ್ರಾರ್ಥನೆಯನ್ನು ಮನ್ನಿಸಿ ಕ್ಷಮಿಸಬೇಕು'- ಎಂದು ಕೇಳಿಕೊಂಡಿದ್ದಾನೆ. ಸಮಸ್ತಜನರ ಪರವಾಗಿ ಈ ಋಷಿಯು ಕೇಳಿಕೊಂಡಿರುವದನ್ನು ನಾವು ಗಮನಿಸಿ ಸಾಧ್ಯವಾದಮಟ್ಟಿಗೂ ದೇವತಾಪರಾಧವಾಗದಂತೆ ನಿತ್ಯಕರ್ಮಗಳನ್ನು ಕಾಲಕಾಲಕ್ಕೆ ಅನುಷ್ಠಿಸಬೇಕು.

**ಓಂ || ಯತ್ಕಿಂಚೇದಂ ವರುಣ ದೈವ್ಯೇ ಜನೇಽಭಿದ್ರೋಹಂ ಮನುಷ್ಯಾಶ್ಚರಾಮಸಿ | ಅಚಿತ್ತೀ ಯತ್ತವ ಧರ್ಮಾ ಯುಯೋಪಿಮ ಮಾ ನಸ್ತಸ್ಮಾದೇನಸೋ ದೇವ ರೀರಿಷಃ ||**

ಹಿಂದಿನ ಮಂತ್ರದಂತೆಯೇ ಇಲ್ಲಿಯೂ ಕ್ಷಮಾಪ್ರಾರ್ಥನೆಯಿದೆ. ಎಲೈ ವರುಣನೆ, **ದೈವ್ಯೇ ಜನೇ**– ದಿವ್ಯಲೋಕವಾಸಿಯಾದ ನಿನ್ನಲ್ಲಿ, **ಯತ್ಕಿಂಚ– ಇದಮಭಿದ್ರೋಹಂ**– ಏನೇನು ಈ ಅಪರಾಧಗಳು, **ಅಚಿತ್ತೀ**– ಅಜ್ಞಾನದಿಂದ **ಮನುಷ್ಯಾಶ್ಚರಾಮಸಿ**– ಮನುಷ್ಯರಾದ ನಾವುಗಳು ಮಾಡುತ್ತಿರುವೆವೋ, ಮತ್ತು **ತವ ಯತ್**– ಯಾವ ನಿನ್ನ, **ಧರ್ಮಾ**–ಕರ್ಮಗಳನ್ನು (ಕರ್ತವ್ಯಪಾಲನೆಯನ್ನು) **ಯುಯೋಪಿಮ**– ಲೋಪಗೊಳಿಸುತ್ತಿರುವೆವೋ ಅದನ್ನು ಕ್ಷಮಿಸು. ಹಾಗೂ **ದೇವ**– ಎಲೈ ದೇವನೆ, **ತಸ್ಮಾದೇನಸಃ**– ಆ ಪಾಪದಿಂದ **ನಃ**– ನಮ್ಮನ್ನು **ಮಾ ರೀರಿಷಃ**– ಹಿಂಸೆಮಾಡಬೇಡ– ಎಂದು ಅಕ್ಷರಾರ್ಥವು. ಮನುಷ್ಯನು ಮತ್ತೆ ಮತ್ತೆ ಅಪರಾಧಗಳನ್ನು ಮಾಡುವದಲ್ಲದೆ ಅವುಗಳನ್ನೆಲ್ಲ ಕ್ಷಮಿಸಿ ಕಾಪಾಡಬೇಕೆಂದೂ ಆಗಾಗ್ಗೆ ದೇವತೆಗಳಿಗೆ ಮೊರೆಯಿಡುತ್ತಾನೆ. ಆಗ ಅಧಿಕಾರದಲ್ಲಿರುವ ದೇವತೆಗಳಿಗೆ ಅವರ ಕರ್ತವ್ಯವನ್ನು ನೆರವೇರಿಸಲು ಅಡ್ಡಿಯಾಗುತ್ತದೆ. ಆದ್ದರಿಂದ ಈ ರೀತಿಯಿಂದಲೂ ಅಪರಾಧವಾಗುತ್ತದೆ. ಇನ್ನು ತಪ್ಪುಮಾಡಿಯೂ ಶರಣಾಗತನಾದವನ ವಿಷಯಕ್ಕೆ ದೇವತೆಯೇನುಮಾಡಬೇಕು ? ಶಿಕ್ಷಿಸಬೇಕೆ ? ರಕ್ಷಿಸಬೇಕೆ ? ಎಂದರೆ ಭಗವಂತನೇ ತಪ್ಪುಮಾಡಿದವನಿಗೂ 'ಶರಣಾಗತನಾಗಿದ್ದೇನೆ' ಎನ್ನುವವನಿಗೆ ರಕ್ಷಣೆಯನ್ನು ನೀಡಿರುವದರಿಂದ ಅದೇ ನ್ಯಾಯವನ್ನನುಸರಿಸಿ ದೇವತೆಗಳೂ ತಮಗೆ ಶರಣುಬಂದವರಿಗೆ ರಕ್ಷಣೆಯನ್ನು ನೀಡುತ್ತಾರೆ. ಇದು ಭಗವಂತನಿಗೂ ಸಮ್ಮತವೇ. ರುದ್ರಾಧ್ಯಾಯದಲ್ಲಿ ಭಕ್ತನು ಹೀಗೆಯೇ ಕೇಳಿಕೊಂಡಿದ್ದಾನೆ. ಏನೆಂದರೆ 'ರುದ್ರನೆ, ನೀನು ಶರಣಾಗತರಿಗೆ ಆಶ್ರಯದಾತನು. ನಾನು ನಿನ್ನನ್ನು ಮೊರೆಹೊಕ್ಕಿರುವೆನು. ಆದ್ದರಿಂದ ನನ್ನ ಪಾಪಗಳಿಗೆ ಶಿಕ್ಷೆಯನ್ನು ನೀಡದಂತೆ ದೇವತೆಗಳಿಗೆ ನನ್ನ ಪರವಾಗಿ ಅಧಿವಚನ (ಪಕ್ಷಪಾತವಚನ)ವನ್ನು ಹೇಳು' ಎಂದೇ ಸ್ಪಷ್ಟವಾಗಿದೆ. ಇದು ನ್ಯಾಯವಾಗಿದೆ. ಏಕೆಂದರೆ 'ನಡೆಯುವವನು ಎಡವುತ್ತಾನೆ' ಎಂಬ ಗಾದೆಯಂತೆ ಕರ್ಮವನ್ನು ಮಾಡುವವನು ತಪ್ಪುಮಾಡುವದು ಸ್ವಭಾವ. ತಪ್ಪಿಗೆ ಶಿಕ್ಷೆ ವಿಧಿಸುವದೂ ನ್ಯಾಯವೇ. ಆದರೆ ಶಿಕ್ಷಾರ್ಹನು ಶರಣಾಗತನಾದರೆ ರಕ್ಷಿಸಬೇಕಾದದ್ದೂ ಧರ್ಮವೇ. ಹೀಗಿದೆ, ಧರ್ಮನ್ಯಾಯಗಳು. ಭಾಗವತದಲ್ಲಿಯೂ ಒಮ್ಮೆ ನಂದಗೋಪನು ಅಕಾಲದಲ್ಲಿ ಯಮುನೆಯಲ್ಲಿ ಸ್ನಾನಮಾಡಿದ್ದಕ್ಕಾಗಿ ವರುಣನು ಕುಪಿತನಾದನೆಂದೂ ಶ್ರೀಕೃಷ್ಣನು ನಂದಗೋಪನನ್ನು ರಕ್ಷಿಸಿದನೆಂದೂ ಕಥೆಯಿದೆ. ಆದ್ದರಿಂದ ನಾವು ದೇವತೆಗಳಲ್ಲಿ ಮಾತ್ರ ವಂಚನೆಯಿಲ್ಲದೆ ನಡೆದುಕೊಳ್ಳಬೇಕು– ಎಂದಭಿಪ್ರಾಯ.

---

# ಗುರುಶಿಷ್ಯಸಂವಾದ

**ಶಿಷ್ಯ :** ಗುರುಗಳೆ, ನವಗ್ರಹಗಳಲ್ಲಿ ಮೊದಲನೆಯ ಮೂವರ ಪರಿಚಯವನ್ನು ಮಾಡಿಕೊಟ್ಟಿರುವಿರಿ; ಮುಂದುವರಿದು ಎಲ್ಲಾ ಗ್ರಹಗಳ ಪರಿಚಯವನ್ನೂ ತಿಳಿಸಿರಿ.

**ಗುರು :** ಆಗಬಹುದು ; ಈಗ ಬುಧದೇವತೆಯ ಪರಿಚಯವನ್ನು ಕೇಳು. ಈತನು ಚಂದ್ರನ ಮಗನು. ಮಗಧದೇಶದಲ್ಲಿ ಹುಟ್ಟಿರುವನು. ಆತ್ರೇಯಗೋತ್ರದವನು. ಭರದ್ವಾಜಋಷಿಪೂಜಿತನು. ಧನಿಷ್ಠಾನಕ್ಷತ್ರಜಾತನು. ತ್ರಿಷ್ಟುಪ್ ಛಂದಸ್ಸನು. ಜಾತರವೆಂಬ ಅಗ್ನಿಪೂಜಕನು. ಶಕ್ತಿ, ಖಡ್ಗ, ಚರ್ಮ-ಗದೆಗಳನ್ನು ಧರಿಸಿರುವವನು, ಚತುರ್ಭುಜನು, ಪೀತಾಂಬರ(ಹಳದಿವಸ್ತ್ರ)ಗಂಧಮಾಲ್ಯವಿಭೂಷಿತನು. ಮರಕತವೆಂಬ ರತ್ನಾಭರಣಭೂಷಿತಕಿರೀಟಧಾರಿಯು. ಹಳದಿಯ ಧ್ವಜಪತಾಕಾದಿಗಳು, ಸಿಂಹವಾಹನವುಳ್ಳವನು. ಹಾಗೂ ಪೀತರಥಾರೂಢನೂ ಆಗಿರುವನು. ಈತನ ಬಲಭಾಗದಲ್ಲಿ ಹಾಗೂ ಎಡಭಾಗಗಳಲ್ಲಿ ವಿಷ್ಣುವೆಂಬ ದೇವತೆಯಿರುವನು. ಇಂಥ ಬುಧಗ್ರಹದೇವತೆಯನ್ನು ಆರಾಧಿಸಿ ಈ ಶ್ಲೋಕವನ್ನು ಜಪಿಸಬೇಕು. "ಪೀತಾಂಬರಃ ಪೀತವಪುಃ ಕಿರೀಟೀ ಚತುರ್ಭುಜೋ ದಂಡಧರಶ್ಚ ಹಾರೀ। ಚರ್ಮಾಸಿಧೃಕ್ ಸೋಮಸುತಃ ಸದಾ ಮೇ ಸಿಂಹಾಧಿರೂಢೋ ವರದೋ ಬುಧಶ್ಚ ॥"

**ಶಿಷ್ಯ :** ಬುಧನ ಪರಿಚಯವಾಯಿತು. ಬೃಹಸ್ಪತಿಗ್ರಹವನ್ನೂ ಪರಿಚಯ ಮಾಡಿಕೊಡಿರಿ.

**ಗುರು :** ಬೃಹಸ್ಪತಿಯನ್ನು 'ಗುರು' ಎಂದೂ ಕರೆಯುವರು. ಈತನು ಸಿಂಧುದೇಶೋತ್ಪನ್ನನು. ಅಂಗೀರಸಗೋತ್ರಜನು. ವಸಿಷ್ಠಋಷಿಪೂಜಿತನು. ಉತ್ತರಾನಕ್ಷತ್ರದಲ್ಲಿ ಹುಟ್ಟಿರುವನು. ತ್ರಿಷ್ಟುಪ್ ಛಂದಸ್ಸನು. ಶಿಖೀ-ಎಂಬ ಅಗ್ನಿಪೂಜಕನು. ಚತುರ್ಭುಜಗಳುಳ್ಳವನಾಗಿದ್ದು ದಂಡ, ಕಮಂಡಲು, ಅಕ್ಷಸೂತ್ರ, ವರದಹಸ್ತನಾಗಿರುವನು. ಹಳದಿಯ ಧ್ವಜಪತಾಕೆಗಳಿಂದಲೂ ವಿಶ್ವರೂಪವೆಂಬ ಹೆಸರಿನ ಬಿಳುಪಾದ ಎಂಟು ಕುದುರೆಗಳಿಂದಲೂ ಕೂಡಿದ ಚಿನ್ನದ ರಥವನ್ನೇರಿ ಕಿರೀಟಧಾರಿಯಾಗಿ ಶೋಭಿಸುತ್ತಿರುವನು. ಪುಷ್ಯರಾಗವೆಂಬ ರತ್ನಗಳಿಂದ ಕೂಡಿದ ಆಭರಣಗಳನ್ನು ತೊಟ್ಟಿರುವನು. ಈತನ ಬಲಭಾಗದಲ್ಲಿ ಇಂದ್ರನೂ ಎಡಭಾಗದಲ್ಲಿ ಬ್ರಹ್ಮನೂ ಇರುವರು. ಇಂಥ ಬೃಹಸ್ಪತಿಯನ್ನು ಧ್ಯಾನಿಸಿ ಈ ಶ್ಲೋಕವನ್ನು ಜಪಿಸಬೇಕು : "ಪೀತಾಂಬರಃ ಪೀತವಪುಃ ಕಿರೀಟೀ ಚತುರ್ಭುಜೋ ದೇವಗುರುಃ ಪ್ರಶಾಂತಃ। ದಧಾತಿ ದಂಡಂ ಚ ಕಮಂಡಲುಂ ಚ ತಥಾಕ್ಷಸೂತ್ರಂ ವರದೋಽಸ್ತು ಮಹ್ಯಮ್"

**ಶಿಷ್ಯ :** ಶುಕ್ರಗ್ರಹದೇವತೆಯ ಪರಿಚಯವನ್ನೂ ಮಾಡಿಕೊಡೋಣವಾಗಲಿ.

**ಗುರು :** ಕೇಳು. ಈತನಿಗೆ 'ಭೃಗು' ಎಂಬ ಮತ್ತೊಂದು ಹೆಸರೂ ಉಂಟು. ಈತನು ಭೋಜಕಟ- ಎಂಬ ದೇಶದಲ್ಲಿ ಹುಟ್ಟಿರುವನು. ಭಾರ್ಗವಗೋತ್ರೋತ್ಪನ್ನನು. ಶೌನಕನೆಂಬ ಋಷಿಯಿಂದ ಪೂಜಿತನು. ಪುಷ್ಯನಕ್ಷತ್ರದಲ್ಲಿ ಜನಿಸಿರು

ವನು. ತ್ರಿಷ್ಟುಪ್ ಎಂಬ ಛಂದಸ್ಸುಳ್ಳವನು. ಹಾಟಕ-ಎಂಬ ಅಗ್ನಿಪೂಜಕನು. ಚತುರ್ಭುಜನಾಗಿಯೇ ದಂಡ, ಅಕ್ಷಸೂತ್ರ, ಕಮಂಡಲು, ವರದಹಸ್ತಗಳುಳ್ಳವನು. ಬಿಳುಪಾದ ವಸ್ತ್ರವನ್ನು ಧರಿಸಿ ಗಂಧಮಾಲ್ಯಗಳಿಂದ ಅಲಂಕೃತನಾಗಿ ವಜ್ರವೆಂಬ ರತ್ನಾಭರಣಕಿರೀಟಧಾರಿಯಾಗಿ ಹೊಳೆಯುತ್ತಿರುವನು. ಬಿಳುಪಾದ ಕುದುರೆಯ ವಾಹನವುಳ್ಳವನು. ಹಾಗೂ ಭೂಮಿಯಲ್ಲಿ ಹುಟ್ಟಿದ ಬಿಳುಪಾದ ಹತ್ತು ಕುದುರೆಗಳಿಂದ ಕೂಡಿದ ರಥವನ್ನೇರಿರುವನು. ಈತನ ಬಲಭಾಗದಲ್ಲಿ ಶಚೀ(ಇಂದ್ರಾಣಿ) ದೇವಿಯೂ ಎಡಭಾಗದಲ್ಲಿ ಇಂದ್ರನೂ ಇದ್ದುಕೊಂಡಿರುವನು. ಇಂಥ ಶುಕ್ರದೇವತೆಯನ್ನು ಧ್ಯಾನಿಸಿ ಈ ಶ್ಲೋಕವನ್ನು ಜಪಿಸಬೇಕು. “ಶ್ವೇತಾಂಬರಃ ಶ್ವೇತವಪುಃ ಕಿರೀಟೀ ಚತುರ್ಭುಜೋ ದೈತ್ಯಗುರುಃ ಪ್ರಶಾಂತಃ । ತಥಾಕ್ಷಸೂತ್ರಂ ಚ ಕಮಂಡಲುಂ ಚ ಜಯಂ ಚ ಬಿಭ್ರದ್ ವರದೋಽಸ್ತು ಮಹ್ಯಮ್ ॥”

**ಶಿಷ್ಯ :** ಶನೈಶ್ಚರನ ಪರಿಚಯವನ್ನೂ ಮಾಡಿಕೊಡೋಣವಾಗಲಿ.

**ಗುರು :** ಕೇಳು. ಈತನು ಸೂರ್ಯನ ಮಗನು. ಕಾಶ್ಯಪಗೋತ್ರದಲ್ಲಿ ಹುಟ್ಟಿರುವನು. ಭೃಗುಮಹರ್ಷಿಪೂಜಿತನು. ರೇವತೀನಕ್ಷತ್ರಜಾತನು. ಸೌರಾಷ್ಟ್ರದೇಶೋತ್ಪನ್ನನು. ಗಾಯತ್ರೀಛಂದಸ್ಕನು. ಮಹಾತೇಜಾ-ಎಂಬ ಅಗ್ನಿಪೂಜಕನು. ನೀಲವರ್ಣನು. ಚತುರ್ಭುಜನಾಗಿದ್ದು ಚರ್ಮ, ಬಾಣ, ಧನುಸ್ಸು, ಶೂಲಾಯುಧಗಳನ್ನು ಧರಿಸಿರುವನು. ನೀಲವರ್ಣದ ವಸ್ತ್ರ-ಗಂಧಮಾಲ್ಯಗಳಿಂದ ಅಲಂಕೃತನಾಗಿ ನೀಲರತ್ನವೆಂಬ ದಿವ್ಯವಾದ ರತ್ನಾಭರಣಭೂಷಿತನಾಗಿ ಕಿರೀಟಧಾರಿಯಾಗಿರುವನು. ಆಕಾಶತತ್ತ್ವದಿಂದ ಹುಟ್ಟಿದ ಜಂಬಾಲ-ಎಂಬ ಹೆಸರಿನ ಎಂಟು ಕುದುರೆಗಳಿಂದ ಕೂಡಿದ, ನೀಲಧ್ವಜ, ಪತಾಕೆಗಳಿಂದ ಅಲಂಕೃತವಾದ ನೀಲರಥವನ್ನು ಏರಿರುವನು. ಹದ್ದು ಸಹ ಇವನ ವಾಹನವಾಗಿರುವದು. ಇವನ ಬಲಭಾಗದಲ್ಲಿ ಪ್ರಜಾಪತಿ-ಎಂಬ ದೇವತೆಯೂ ಎಡಭಾಗದಲ್ಲಿ ಯಮನೆಂಬ ದೇವತೆಯೂ ಇದ್ದುಕೊಂಡಿರುವರು. ಈ ರೀತಿಯಾಗಿ ಧ್ಯಾನಿಸಿ ಪೂಜಿಸಿ ಈ ಶ್ಲೋಕವನ್ನು ಜಪಿಸಬೇಕು. “ನೀಲದ್ಯುತಿಃ ಶೂಲಧರಃ ಕಿರೀಟೀ ಗೃಧ್ರಸ್ಥಿತೋ ಬಾಣಕರೋ ಧನುಷ್ಮಾನ್ । ಚತುರ್ಭುಜಃ ಸೂರ್ಯಸುತಃ ಪ್ರಶಾಂತಃ ವರಪ್ರದೋ ಮೇಽಸ್ತು ಸ ಮಂದಗಾಮೀ ॥”

**ಶಿಷ್ಯ :** ಗುರುಗಳೆ, ನಡುವೆ ನನ್ನದೊಂದು ಪ್ರಶ್ನೆ. ಗ್ರಹದೇವತೆಗಳಲ್ಲಿ ಒಳ್ಳೆಯವರು, ಕೆಟ್ಟವರು- ಎಂಬ ವಿಭಾಗವುಂಟೆ ?

**ಗುರು :** ದೇವತಾಸ್ವರೂಪರಾದ ಗ್ರಹಗಳು ತಮ್ಮ ಪೂರ್ವಪುಣ್ಯದಿಂದ ಅಧಿಕಾರಸ್ಥಾನವನ್ನು ಹೊಂದಿರುವರು. ಆದ್ದರಿಂದ ಎಲ್ಲರೂ ಪೂಜ್ಯರು. ಅವರುಗಳು ಮಾನವನ ಪಾಪ-ಪುಣ್ಯಗಳನ್ನು ಸೂಚಿಸುವದರಿಂದ ಶಾಸ್ತ್ರದಲ್ಲಿ ಹಾಗೆ ವಿಭಾಗಮಾಡಿರುವದು ನಿಜ. ಆದರಂತೆ ಬುಧ-ಗುರು-ಶುಕ್ರರನ್ನು ಶುಭಸೂಚಕರೆಂದೂ ಸೂರ್ಯ-ಅಂಗಾರಕ-ಶನಿಗಳನ್ನು ಪಾಪಸೂಚಕರೆಂದೂ ಚಂದ್ರನು ತಾನೊಬ್ಬನೇ ಇದ್ದಾಗ ಶುಭನೆಂದೂ ಪಾಪಗ್ರಹಗಳೊಡನೆ ಸೇರಿದಾಗ ಪಾಪಸೂಚಕನೆಂದೂ ತಿಳಿಯಬೇಕು. —— (ಸಶೇಷ)

# ಜೀವನದಲ್ಲಿ ಸಾರ

('ಅಧ್ಯಾತ್ಮಪ್ರಕಾಶ'ದ ಹಳೆಯ ಸಂಚಿಕೆಯಿಂದ–ಮಾರ್ಚ್ 1947)

ಯಾರಿಗಾದರೂ ಬದುಕಿರುವದು ಬೇಕು. ಆದರೆ ಬದುಕಿನಲ್ಲಿರುವ ಸವಿ ಯಾವದು ? ಏತಕ್ಕಾಗಿ ನಾವು ಬದುಕಿರಬೇಕು ? ಎಂಬ ಪ್ರಶ್ನೆಗೆ ಎಲ್ಲರೂ ಒಂದೇ ಉತ್ತರವನ್ನು ಕೊಡುವದಿಲ್ಲ. ಅದೇ ಮನುಷ್ಯನು ಬೇರೆಬೇರೆಯ ಸ್ಥಿತಿಯಲ್ಲಿ ಬೇರೆಬೇರೆಯ ಉತ್ತರವನ್ನು ಕೊಡುತ್ತಾನೆ.

ಚಿಕ್ಕಮಕ್ಕಳಿಗೆ ಆಟವು ಬೇಕು. ಅವಕ್ಕೆ ಊಟ, ತಿಂಡಿ– ಮುಂತಾದವು ಗಳೂ ಬೇಕಾದರೂ ಮುಖ್ಯವಾಗಿ ಆಟವು ಬೇಕು. ಪ್ರಪಂಚವೆಲ್ಲ ಹುಡುಗರಿಗೆ ಒಂದು ವಿಚಿತ್ರಪ್ರದರ್ಶನಶಾಲೆಯಾಗಿರುತ್ತದೆ. ಅವರು ಕಂಡಕಂಡದ್ದನ್ನೆಲ್ಲ ನೋಡಿ ನಲಿಯಬೇಕು. ಅವರು ಮನಬಂದಂತೆ ಓಡಾಡಬೇಕು. ಜೊತೆಯವರೊಡಗೂಡಿ ಆಡುತ್ತಿರಬೇಕು ; ನಗುತ್ತಿರಬೇಕು. ವಯಸ್ಸಾದರೂ ಎಷ್ಟೋ ಜನರು ಮಕ್ಕಳಾಗಿಯೇ ಉಳಿದುಕೊಂಡುಬಿಟ್ಟಿರುತ್ತಾರೆ. ಅವರಿಗೆ ವಿನೋದದಿಂದ ಕಾಲವನ್ನು ಕಳೆಯುತ್ತಿರಬೇಕೆಂದು ಬಲವಾದ ಇಚ್ಛೆಯಿರುತ್ತದೆ. ಆದರೆ ಅವರು ಬೇಡವೆಂದರೂ ದುಃಖವು ಮೇಲೆ ಬೀಳುತ್ತಿರುತ್ತದೆ.

ಕೆಲವರಿಗೆ ಊಟ, ತಿಂಡಿ, ಉಡಿಗೆತೊಡಿಗೆ–ಇವುಗಳಿಗಾಗಿ ಬದುಕಿರಬೇಕೆನಿಸುತ್ತದೆ. ಅವರಿಗೆ ಬಗೆಬಗೆಯಾದ ಸವಿಯಾದ ಆಹಾರಪಾನೀಯಗಳು ಬೇಕು. ಉತ್ಕೃಷ್ಟವಾದ ಸುಂದರವಾದ ಉಡುಪು ಬೇಕು. ಆದರೆ ಅನ್ನವಾಗಲಿ, ಬಟ್ಟೆಯಾಗಲಿ ಅವರು ಬಯಸಿದಷ್ಟು ಸಿಗುವದಿಲ್ಲ. ಅಥವಾ ಅವು ಸಿಕ್ಕುವಹೊತ್ತಿಗೆ ಆ ಸುಖವನ್ನು ಅನುಭವಿಸುವ ಯೋಗ್ಯತೆಯು ಕುಗ್ಗಿಹೋಗಿರುತ್ತದೆ.

ಕೆಲವರಿಗೆ ವಿದ್ಯೆ ಬೇಕು ; ಕೆಲವರಿಗೆ ಧನವು ಬೇಕು. ಕೆಲವರಿಗೆ ಕೀರ್ತಿಯು ಬೇಕು. ಕೆಲವರಿಗೆ ದಾಂಪತ್ಯಸುಖವು ಬೇಕು. ಕೆಲವರಿಗೆ ಅಧಿಕಾರವು ಬೇಕು. ಕೆಲವರಿಗೆ ಗೌರವವು ಬೇಕು. ಹೀಗೆ ಅವರವರಿಗೆ ಬೇಕಾದದ್ದು ಇದ್ದರೆ ಜೀವನವು ಸವಿಯಾಗಿರುತ್ತದೆ. ಇಲ್ಲದಿದ್ದರೆ ಜೀವನದಲ್ಲಿ ಯಾವ ಸವಿಯೂ ಇಲ್ಲವೆಂದು ತೋರುತ್ತದೆ. ಒಬ್ಬನಿಗೇ ಒಂದು ಕಾಲದಲ್ಲಿ ಬೇಕಾದದ್ದು ಇನ್ನೊಂದು ಕಾಲದಲ್ಲಿ ಬೇಡವಾಗುತ್ತದೆ. ಮೊದಲು ಬೇಡವಾಗಿದ್ದು ಆಮೇಲೆ ಬೇಕಾಗುತ್ತದೆ. ಯಾವಾಗ ಯಾವನಿಗೆ ಯಾವದ್ದು ಬೇಕೋ ಆಗ ಅವನಿಗೆ ಅದೇ ಜೀವನದ ಸಾರವಾಗಿರುತ್ತದೆ. ಆದರೆ ಇವುಗಳಲ್ಲಿ ಯಾವದೊಂದೂ ಯಾವಾಗಲೂ ಎಲ್ಲರಿಗೂ ಬೇಕಾಗಿರುವದಿಲ್ಲವೆಂಬುದು ನಿಶ್ಚಯವು.

ಹಾಗಾದರೆ ಲೋಕದಲ್ಲಿ ಎಲ್ಲರಿಗೂ ಯಾವಾಗಲೂ ಬೇಕಾದದ್ದು ಯಾವದಾದರೊಂದು ವಸ್ತು ಇರುವದೆ? ಯಾವದೊಂದು ಇದ್ದರೆ ಮಿಕ್ಕದ್ದು ನಮಗೆ ಅದಕ್ಕಾಗಿ ಬೇಕೆನಿಸುವದೋ, ಯಾವದೊಂದು ಎಂದಿಗೂ ನಮಗೆ ಬೇಡ– ಎನ್ನಿಸುವ ಸಂಭವವೇ ಇಲ್ಲವೋ ಅಂಥ ಪದಾರ್ಥ ಉಂಟೆ ?– ಎಂಬುದನ್ನು ಈಗ ವಿಚಾರ

ಮಾಡಬೇಕಾಗಿದೆ. ಈ ವಿಷಯದಲ್ಲಿ ಪೂರ್ವಿಕರಾದ ನಮ್ಮ ಮಹರ್ಷಿಗಳು ನಮಗೆ ಮಾರ್ಗದರ್ಶಕರಾಗಿರುತ್ತಾರೆ. ಬಹುಪುರಾತನಕಾಲದಲ್ಲಿ ನಮ್ಮ ದೇಶದಲ್ಲಿ ಯಾಜ್ಞವಲ್ಕ್ಯನೆಂಬ ಒಬ್ಬ ಮಹರ್ಷಿಯಿದ್ದನು. ಆತನಿಗೆ ರಾಜಪುರೋಹಿತನ ಸ್ಥಾನ, ಮಾನ, ಅಧಿಕಾರ, ಗೌರವಗಳೆಲ್ಲ ಇದ್ದವು. ಜನಕಚಕ್ರವರ್ತಿಯೇ ಅತನ ಪ್ರಿಯ ಶಿಷ್ಯನಾಗಿದ್ದನೆಂದಮೇಲೆ ಹೇಳುವದೇನಿದೆ ?

ಒಮ್ಮೆ ಆತನು ತನ್ನ ಪ್ರಿಯಪತ್ನಿಯಾದ ಮೈತ್ರೇಯಿಗೆ ಮೇಲ್ಕಂಡ ಪ್ರಶ್ನೆಗೆ ಉತ್ತರವನ್ನು ಹೇಳಿರುತ್ತಾನೆ. ಗಂಡ, ಹೆಂಡತಿ, ಧನ, ಪಶುಪುತ್ರಾದಿಗಳು, ದೇವತೆಗಳು, ಪುಣ್ಯಲೋಕಗಳು, ಜೀವರುಗಳು– ಎಲ್ಲವೂ ಆಯಾ ವಸ್ತುಗಳಿಗಾಗಿಯೇ ಬೇಕೆನಿಸುವದಿಲ್ಲ. ಆದರೆ ತನಗಾಗಿ ಎಲ್ಲವೂ ಬೇಕೆನಿಸುವದು. ಉದಾಹರಣೆಗೆ ಒಂದು ಮನೆಯು ಮನೆಗಾಗಿ ಬೇಕೆನಿಸುವದಿಲ್ಲ. ಆ ಮನೆಯು ತನಗಾಗಿ ಎಂದಾದರೆ ಬೇಕೆನಿಸುವದು. ಹೀಗೆಯೇ ಉಳಿದವುಗಳನ್ನೂ ತಿಳಿಯಬೇಕು. 'ತಾನುಂಟೊ, ಮೂರು ಲೋಕವುಂಟೊ'– ಎಂಬ ಗಾದೆಗೆ ಇದೇ ಅಭಿಪ್ರಾಯವು. ಒಟ್ಟಿನಲ್ಲಿ ಎಲ್ಲವೂ ತನಗಾಗಿ ಮಾತ್ರ ಪ್ರಿಯವಾಗಿರುತ್ತವೆ. ಆದ್ದರಿಂದ ಲೋಕದಲ್ಲಿ 'ತಾನು' ಎಂಬ ಪದಾರ್ಥವು ಮಾತ್ರ ಎಲ್ಲರಿಗೂ ಯಾವಾಗಲೂ ಅತ್ಯಂತಪ್ರಿಯವಾಗಿರುವದು. ಮನೆ, ಮಕ್ಕಳು, ದೇಹ– ಮುಂತಾದವುಗಳಲ್ಲಿ ಕೂಡ ತಾನು, ತನ್ನದು– ಎಂಬ ಅಭಿಮಾನವಿರುವವರೆಗೂ ಅವು ಬೇಕೆನಿಸುತ್ತವೆ. ಆ ಅಭಿಮಾನವು ಹೋದಕೂಡಲೆ ಅವು ಬೇಡವಾಗುತ್ತವೆ.

ತಾನು ಎಂಬುದನ್ನು ಸಂಸ್ಕೃತಭಾಷೆಯಲ್ಲಿ 'ಆತ್ಮ' ಎನ್ನುವರು. ಆತ್ಮನೇ ನಮಗೆಲ್ಲರಿಗೂ ಬೇಕು. ಆತ್ಮನಿಗಾಗಿ ಮಿಕ್ಕದ್ದೆಲ್ಲವೂ ಬೇಕು. ಆತ್ಮಲಾಭಕ್ಕಿಂತ ಹೆಚ್ಚಿನ ಲಾಭವಿಲ್ಲ. ಇಡಿಯ ಜಗತ್ತನ್ನೇ ಸಂಪಾದಿಸಿದರೂ ಆತ್ಮಲಾಭಕ್ಕೆ ಅದು ಎಂದಿಗೂ ಸಮನಾಗಲಾರದು. ಯಾವನು ತನ್ನ ಆತ್ಮನನ್ನು– ಎಂದರೆ ಅನಾತ್ಮಗಳ ಸಂಪರ್ಕವಿಲ್ಲದ ನಿತ್ಯಶುದ್ಧಬುದ್ಧಮುಕ್ತವಾದ ತನ್ನ ನಿಜಸ್ವರೂಪವನ್ನು ಕಂಡುಕೊಳ್ಳುವನೋ ಆವನಿಗೆ ಇನ್ನು 'ಇದು ಬೇಕು' ಎಂಬ ಹಂಬಲಿಕೆಯು ಉಳಿಯುವದಿಲ್ಲ. ಆದ್ದರಿಂದಲೇ ಯಾಜ್ಞವಲ್ಕ್ಯನು ಮೈತ್ರೇಯಿಗೆ "ಎಲೆ, ಆತ್ಮನನ್ನೇ ಕಂಡುಕೊಳ್ಳಬೇಕು ; ಅದಕ್ಕಾಗಿ ಆತ್ಮನ ವಿಷಯವಾಗಿಯೇ ಕೇಳಬೇಕು ; ಮನನಮಾಡಬೇಕು ; ನಿದಿಧ್ಯಾಸನಮಾಡಬೇಕು ; ಆತ್ಮನನ್ನೇ ಅನುಭವಕ್ಕೆ ತಂದುಕೊಳ್ಳಬೇಕು– ಹೀಗೆ ಆತ್ಮನನ್ನು ಕುರಿತು ಕೇಳಿ, ಮನನಮಾಡಿ, ಮನದಟ್ಟುಮಾಡಿಕೊಂಡರೆ ಇದೆಲ್ಲವನ್ನೂ ಅರಿತಂತೆ ಆಗುವದು" ಎಂದು ಹೇಳಿರುತ್ತಾನೆ. ಇಂಥ ಆತ್ಮಸ್ವರೂಪವನ್ನು ಕಂಡುಕೊಳ್ಳುವ ವಿದ್ಯೆಯೇ **ಅಧ್ಯಾತ್ಮವಿದ್ಯೆಯು.** ಹಾಗೆ ಕಂಡುಕೊಳ್ಳಲು ನಾವು ಮಾಡಬೇಕಾದ ಪ್ರಯತ್ನಗಳನ್ನು ಕುರಿತು ವಿವರಿಸುವ ಶಾಸ್ತ್ರವೂ ಅಧ್ಯಾತ್ಮಶಾಸ್ತ್ರವೆನಿಸಿರುವದು. ವಾಚಕರೆ, ನಿಮಗೆ ಈ ಅಧ್ಯಾತ್ಮವಿದ್ಯೆಯು ಬೇಕೆಂಬ ಹಂಬಲವಿದೆಯೆ ? ——

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನಮಹಾಪೋಷಕರುಗಳು :** ಶ್ರೀ॥ MPN. 931. ಪಿ. ಗೋವಿಂದಭಟ್ ರವರು, ವಿಟ್ಲ ; 932. ಹುಂಗಿ ಪಿ. ಈಶ್ವರ-ರವರು, ಹಾರ್ನೆಲ್ ; (ಅಮೆರಿಕ) 933. ಡಿ.ಕೆ. ರಾಮಚಂದ್ರರವರು, ಬೆಂಗಳೂರು ; 934. ಎಸ್. ಹರಗೋಪಾಲ್‌ರವರು, ಬೆಂಗಳೂರು ; 935. ಪಿ. ಲಿಂಗಣ್ಣನವರು, ಬೆಂಗಳೂರು ; 936. ಎಂ. ಆನಂದಾಚಾರಿಯವರು, ಬೆಂಗಳೂರು; 937. ಕೆ. ಎಸ್. ದತ್ತಾತ್ರಿಯವರು, ಬೆಂಗಳೂರು– ಈ ಮಹಾಶಯರುಗಳು ರೂ. ೧೫೧ರಂತೆ ಮಹಾಪೋಷಣದ್ರವ್ಯವನ್ನು ನೀಡಿರುತ್ತಾರೆ. MPO. 130. ಬಿ.ಕೆ. ಅನಂತರಾಮಯ್ಯನವರು, ಬೆಂಗಳೂರು ; 566. ಹೆಚ್.ಎಸ್. ಜಯರಾಂರವರು, ಬೆಂಗಳೂರು ; 405. ಡಾ॥ ಬಿ.ಎನ್. ವೇಣುಗೋಪಾಲರಾವ್, ಹಾಸನ– ಇವರುಗಳು ರೂ. ೫೦ನ್ನು ಹೆಚ್ಚಿಗೆ ನೀಡಿರುತ್ತಾರೆ. MPO. 90. ಶ್ರೀ ಎಂ.ಸಿ. ಗುಂಡೂರಾವ್, ಹಾಸನ- ಇವರು ರೂ. ೧೦೦ನ್ನು ನೀಡಿರುತ್ತಾರೆ.

**೫೬ನೆಯ ಸಂಪುಟಕ್ಕೆ ಪೋಷಕರುಗಳು :** ಶ್ರೀಗಳಾದ : ಚಂದ ನಂ. 8. ರುಕ್ಮಿಣಮ್ಮನವರು, ಧಾರವಾಡ ; 18. ಎ.ಆರ್. ಲಕ್ಷ್ಮೀನರಸಿಂಹಮೂರ್ತಿಗಳು, ಎಮ್ಮಿಗನೂರು ; 19. ಶಿವಶಂಕರಪ್ಪಾದೇವರ್, ಕಲ್ಬುರ್ಗಿ ; 22. ಹೆಚ್. ಸಂಜುಂಡಶಾಸ್ತ್ರಿಗಳು, ಬೆಂಗಳೂರು ; 32. ಕೆ. ಶೇಷಗಿರಿಶಾಸ್ತ್ರಿಗಳು, ಭದ್ರಾವತಿ ; 38. ರುಕ್ಮಿಣಮ್ಮನವರು, ಬಿಜಾಪುರ ; 40. ಜಿ. ರಾಮಪ್ಪನವರು, ಹಿರಿಯೂರು (ರೂ. ೨೫) ; 42. ಹೆಚ್. ಹನುಮಂತಪ್ಪನವರು, ದಾವಣಗೆರೆ; 43. ಜಿ. ಕೃಷ್ಣರವರು, ಬೆಂಗಳೂರು ; 44. ಎಸ್. ಕೇಶವಭಟ್ಟರು, ಕೊಡ್ಲಮೊಗ್ರು ; 51. ಎಸ್. ಕೃಷ್ಣಮೂರ್ತಿಯವರು, ಬೆಂಗಳೂರು ; 57. ಹೆಚ್. ಸೂರ್ಯನಾರಾಯಣರವರು, ಬೆಂಗಳೂರು ; 61. ಸಿ.ಎಸ್. ಗಂಗಾಧರರಾಯರು, ಬೆಂಗಳೂರು ; 62. ಸಿ.ಎಸ್. ರಾಮಕೃಷ್ಣ, ಬೆಂಗಳೂರು ; 63. ಸಿ.ಎಸ್. ರಾಮಸ್ವಾಮಯ್ಯನವರು, ವಿಶ್ವನೀಡಂ ; 64. ಹೆಚ್. ಎಸ್. ಗೋಪಾಲರಾಯರು, ಚಿತ್ರದುರ್ಗ : 67. ಟಿ.ಎನ್. ಶಿವರಾಮಯ್ಯನವರು, ಇಡವಲಯಾರ್ ; 69. ಆರ್. ನರಸಿಂಹಸ್ವಾಮಿಯವರು, ಬೆಂಗಳೂರು ; 73. ಬಿ.ಎನ್. ಸುಬ್ಬರಾಯರು, ಬೆಂಗಳೂರು ; 84 ಕೆ.ಎನ್. ಗೋಪಾಲ್‌ರವರು, ಭದ್ರಾವತಿ ; 85. ಎಸ್. ರಾಜಗೋಪಾಲ್‌ರವರು, ಭದ್ರಾವತಿ ; 94. ಸುರೇಶ ಎಸ್. ದೀಕ್ಷಿತರು, ಬೆಂಗಳೂರು ; 95. ಸಿ. ಕೃಷ್ಣಮೂರ್ತಿಯವರು, ತಿಪಟೂರು ; 107. ಕೆ.ಎನ್. ರಾಮಮೂರ್ತಿಯವರು, ದುರ್ಗಾಪುರ ; 119. ಹೆಚ್. ಕರಿಯಣ್ಣನವರು, ಚಂದಾ (ಮಹಾರಾಷ್ಟ್ರ) ; 120. ಎಸ್. ಎಸ್. ರಾಘವಾಚಾರ್ಯರು, ಮೈಸೂರು ; 121. ಎಸ್.ಆರ್. ಶೇಷಾದ್ರಿಯವರು, ಬೆಂಗಳೂರು ; 123. ಬಿ.ಸಿ. ಸಿದ್ದಪ್ಪನವರು, ಮಡಿಕೇರಿ ; 138. ಕೆ.ಆರ್. ವೆಂಕಟಸುಬ್ಬಯ್ಯನವರು, ಭದ್ರಾವತಿ ; 139. ಓ.ಕೆ. ಕಮಲಾರವರು, ಮಡಿಕೇರಿ ; 140. ಹೆಚ್.ಎಸ್. ಹುಲಮುನಿಯವರು, ಗದಗ ; 141. ಸಿ.ಎಂ. ದೇಶಪಾಂಡೆಯವರು, ಹುಬ್ಬಳ್ಳಿ ; 142. ಮೌನೇಶ್ವರಸ್ವಾಮಿಜಿಯವರು, ಲಿಂಗಸೂಗೂರು, 162. ಮಹಾಬಲೇಶ್ವರ ವೆಂಕಟರಮಣ ಹೆಗಡೆಯವರು, ಭೈರುಂಬೆ (ರೂ. ೩೫); 135. ವೆಂಕಟರಮಣ ಮಹಾಲಲೇಶ್ವರ ಹೆಗಡೆಯವರು, ಹುಳಗೊಳ (ರೂ. ೩೫); 181. ಕೆ. ಶ್ರೀನಿವಾಸಮೂರ್ತಿಗಳು, ಹಗರಿಗಜಪುರ ; 182. ವೈದ್ಯ ಆರ್.ಕೆ. ಕುಲಕರ್ಣಿಯವರು, ಬೆಳಗಾಂ ; 191. ಎ.ಹೆಚ್. ಗೋಪಾಲರಾಯರು, ಮೈಸೂರು ; 192. ಹೆಚ್. ಸೂರ್ಯನಾರಾಯಣಪ್ಪನವರು, ಬಾಣಸಂದ್ರ ; 195. ಶ್ರೀಶ್ರೀ ಡಿ. ರೂಢಸ್ವಾಮಿಯವರು, ಕಿತ್ತೂರು ; 204. ಅಂಬಿಕಾ ಕೆ. ಮೂರ್ತಿಯವರು, ಕೊಲ್ಲಾಪುರ ; 207. ಬಿ.ಎಸ್. ಲಕ್ಷ್ಮೀನಾರಾಯಣರವರು, ಭದ್ರಾವತಿ ; 218. ಡಿ.ಎಲ್. ಸುಬ್ರಹ್ಮಣ್ಯಂರವರು, ಬೆಂಗಳೂರು ; (ರೂ. ೨೫) 221. ಎ.ಎಸ್. ರಾಮರಾಯರು, ಬೆಂಗಳೂರು ; 224. ಕೆ.ಎನ್. ಬೈರಪ್ಪನವರು, ಬೆಂಗಳೂರು ; 225. ಕೆ. ಮಲ್ಲಿಕಾರ್ಜುನರವರು, ಬೆಂಗಳೂರು ; 240. ಎಂ.ಎಸ್. ಸುಬ್ರಹ್ಮಣ್ಯರವರು, ಬೆಂಗಳೂರು ; 246. ಅಚ್ಚಮ್ಮ ಸೀತಾರಾಮಭಟ್ಟರು, ಬೆಂಗಳೂರು ;

247. ಆರ್.ಡಿ. ರಂಗಾಪೂರ್‌ರವರು, ಗದಗ (ರೂ. ೩೫) ; 254. ಎಸ್. ಕೃಷ್ಣಪ್ಪನವರು, ಬೆಂಗಳೂರು ; 255. ಹೆಚ್.ಎಸ್.ಎನ್. ಮೂರ್ತಿಯವರು, ಮೈಸೂರು ; 263. ಕೆ.ಟಿ. ಅನಂತಸುಬ್ಬರಾವ್‌ರವರು, ಬೆಂಗಳೂರು , ೭71. ಜಿ. ಮೋಹನ್‌ರಾವ್‌ರವರು, ಹೊಸದುರ್ಗ, 275, ಎನ್. ಸೂರ್ಯನಾರಾಯಣಶಾಸ್ತ್ರಿಗಳು, ಬೆಂಗಳೂರು; 278. ಆರ್, ಅನಂತರಾಮಯ್ಯನವರು, ನಂಜನಗೂಡು ; 281. ಪಂಡಿತ್ ಕೇಶವಶಾಸ್ತ್ರಿ ಹೆಬ್ಬಾಳಕರ್, ಷಹಬಾದ್ ; 285. ವೈ.ಕೆ. ಮರಿಸಿದ್ದೇಗೌಡರು, ಮಂಡ್ಯ ; 286. ರವಿಪ್ರಕಾಶ್‌ರವರು; ಸರಗೂರು ; 287. ಎಂ.ವಿ, ಸೀತಾರಾಮಯ್ಯನವರು, ತಿಪಟೂರು; 288, ಡಿ.ಎಸ್, ಸುಬ್ಬರಾಯರು, ತಿಪಟೂರು; 293, ಪಿ. ಶಿವಾನಂದಶಾಸ್ತ್ರಿಯವರು, ಹರಿಹರ ; ದಾವಣಗೆರೆಯಲ್ಲಿ : 294, ಕೆ. ಎಸ್. ರಾಮಣ್ಣನವರು, 295. ಎಸ್.ಎನ್, ಅನಂತರಾಮನ್‌ರವರು, 296 ಎಂ.ಜೆ. ಚಂದ್ರಶೇಖರ್‌ರವರು, 297. ಎ. ಗೋವಿಂದಶೆಟ್ಟಿಯವರು, 298, ಕೆ.ಎಸ್. ಶೇಷಾದ್ರಿಯವರು, 299. ತಿಪ್ಪೆಸ್ವಾಮಿರೆಡ್ಡಿಯವರು, 301. ಜಯವಿಭವ ರವರು, 375, ಡಿ,ಎಸ್, ಅಶ್ವತ್ಥನಾರಾಯಣರಾವ್, 376, ಡಿ,ಎಸ್. ಗಣೇಶರಾವ್, 377. ಡಿ,ಎಸ್. ಶೇಷಾದ್ರಿಯವರು, 378, ಎನ್. ಆರ್. ರಂಗನಾಥರಾವ್‌ರವರು, -81. ಎನ್,ಆರ್. ವಾಸುದೇವಮೂರ್ತಿಯವರು, 383, ಎಸ್. ರಾಮನಾಥದೀಕ್ಷಿತರು, 389. ಆರ್,ಎಸ್. ರಾಮಪ್ರಸಾದ್‌ರವರು, 390, ಆರ್.ಡಿ. ದೀಕ್ಷಿತರು, 391. ಬಿ.ಎನ್, ನಾರಾಯಣಸ್ವಾಮಿಯವರು, 392. ಹೆಚ್,ಡಿ. ಮಹಾಬಲಗಿರಿಯಪ್ಪನವರು, 393, ಹೆಚ್,ವಿ. ಕುಮಾರಸ್ವಾಮಿಯವರು, 394, ಎಂ.ಜೆ. ಶ್ರೀಕಂಠಯ್ಯನವರು, 395, ಎಂ.ಸಿ. ಕೃಷ್ಣಮೂರ್ತಿಯವರು, 302. ಹೆಚ್.ಕೆ, ರಮೇಶ್‌ರವರು, ತಿಪಟೂರು 303. ಕೆ. ಕೆ. ವೇಣುಗೋಪಾಲ್‌ರವರು, ಅರಸೀಕೆರೆ ; 304, ಬಿ. ವಿಠಲದಾಸಭಟ್ಟರು, ಕೊಲಂಬಿ ; 305. ಎನ್.ಎಸ್. ರಾಧಾಕೃಷ್ಣರವರು, ನಾಗಮಂಗಲ ; 306, ಟಿ, ಹೆಚ್. ವೀರಭದ್ರಪ್ಪನವರು, ನೆಲಮಾಕನಹಳ್ಳಿ ; 328, ಹೆಚ್, ಬಿ, ಮೀನಾಕುಮಾರಿಯವರು, ಶಿವಮೊಗ್ಗ ; 329. ಎಸ್.ಎಂ. ಲಲಿತಾಂಬ, ಶಿವಮೊಗ್ಗ; 331. ಎನ್.ಜಿ. ಸೀತಾರಾಮಯ್ಯನವರು, ಬೆಂಗಳೂರು ; 335, ಎಸ್.ಎನ್. ಶ್ರೀನಿವಾಸಮೂರ್ತಿಗಳು, ಬೆಂಗಳೂರು ; 336, ಎಂ. ಶಾಂತಪ್ಪನವರು, ಮೈಸೂರು ; 337. ಆರ್. ವೀರಪ್ಪನವರು, ಬೆಂಗಳೂರು ; 343, ಎಸ್. ರಾಮಸ್ವಾಮಿಯವರು, ಸಿರಾ ; 344, ಟಿ. ಸುಬ್ಬರಾಯರು, ನಾಗಮಂಗಲ ; 345, ಎನ್,ಕೆ, ಶ್ರೀನಿವಾಸಮೂರ್ತಿಯವರು, ಮೈಸೂರು ; 346. ಸೋಮೇಶ್ವರ ವೀರಪ್ಪ ಹೆಗಡೆ, ಮಾವಿನಕೊಪ್ಪ ; 347. ಡಾ|| ಸಿ. ವೈ, ರಾಮದಾಸ್‌ರವರು, ಬಳುವನೇರಲು ; 348, ವೇ|| ಕೇಶವಮೂರ್ತಿಘನಪಾಠಿಗಳು, ಶಿವಮೊಗ್ಗ; 361, ಎ.ಎನ್.ಕೆ. ಮೂರ್ತಿಯವರು,ಬೆಂಗಳೂರು 364. ಹೆಚ್. ಕೆ. ಹೆಚ್. ರಾವ್, ಬಲಸೂರು (ಒರಿಸ್ಸಾ) ; 396, ಕೆ. ಫಣಿರಾಜ್‌ರವರು, ಬೆಂಗಳೂರು ; 397. ಆರ್,ವಿ. ಭಜಸಿಮನಿಯವರು, ಗದಗ : 401. ಬಿ.ಜಿ. ಸುಬ್ರಹ್ಮಣ್ಯ, ಶಿಕಾರಿಪುರ : 403. ಗೋವಿಂದ ವಿ. ಪಾಟೀಲ್, ತೀರ್ಥಹಳ್ಳಿ- ಈ ಮಹಾಶಯರುಗಳು ರೂ. ೨೦ರಂತೆ ಪೋಷಣದ್ರವ್ಯವನ್ನು ನೀಡಿರುತ್ತಾರೆ.

1986ನೇ ಆಗಸ್ಟ್ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :—

**ಗ್ರಂಥಪ್ರಕಟನೆಗೆ :** ಮಿಸ್. ರತ್ನಾ ಎನ್. ರಾವ್, ಪುಣೆ-ರವರು ರೂ. ೩೦೦ : ಡಾ|| ಜೆ.ವಿ. ಪೂರ್ಣಚಂದ್ರರಾವ್, ಗುಂಟೂರು ರೂ. ೨೫೦ (ಛಾಂದೋಗ್ಯಭಾಷ್ಯಕ್ಕಾಗಿ) : ಸಿ.ಎಂ, ಪ್ರಭಾಕರ್‌ರವರು, ಬೆಂಗಳೂರು ರೂ. ೨೦ : ಕೆ. ವಿ. ಮಂಗಳಾಂಬರವರು, ಚಿತ್ರದುರ್ಗ ರೂ, ೨೫— ಒಟ್ಟು, ರೂ. ೫೯೫.

**ಪೂಜಾಮಂದಿರನಿಧಿಗೆ :** ಮಿಸ್ ರತ್ನಾ ಎನ್. ರಾವ್‌ರವರು, ಪುಣೆ ರೂ. ೧೦೦ : ಹೆಚ್.ಎಂ. ಭಾಸ್ಕರ್‌ರವರು, ಹೊಸಪೇಟೆ ರೂ. ೩೦ : ಯಾದಾಳಂ ವಂಶೀಕರು, ರೂ. ೧೫ : ಒಟ್ಟು, ರೂ, ೧೪೫.

ಗುರುಮಂದಿರನಿಧಿಗೆ: ಯಾದಾಳಂ ಪಂಶೀಕರು ರೂ, ೧೦ : ಎಸ್, ಕೃಷ್ಣಮೂರ್ತಿಯವರು, ಕೋಲಾರ ರೂ. ೧೦ : ವಿನೋದಮ್ಮನವರು, ಯಕ್ಕನಹಳ್ಳಿ ರೂ. ೪೦ : ಎಂ.ಕೆ, ಕೃಷ್ಣಪ್ಪನವರು, ಬೆಂಗಳೂರು ರೂ, ೧೦ : ಪಿ, ಆರ್, ರಂಗಸ್ವಾಮಿಯವರು, ಬೆಂಗಳೂರು ರೂ, ೧೦-ಒಟ್ಟು ರೂ. ೮೦.

ಸಂನ್ಯಾಸಿಗಳ ಸತ್ಕಾರನಿಧಿಗೆ: ಶ್ರೀಗಳಾದ: ಎನ್. ಎಲ್. ರಾಮಚಂದ್ರರವರು, ಬೆಂಗಳೂರು ರೂ. ೧೦ : ವೈ, ಕೆ, ವಿನೋದಮ್ಮನವರು, ಯಕ್ಕನಹಳ್ಳಿ ರೂ. ೫೦ : ಹೆಚ್. ಎಸ್. ಎನ್, ಮೂರ್ತಿಯವರು, ಮೈಸೂರು ರೂ. ೧೦ : ಕೆ. ವಿ. ಮಂಗಳಾಂಬರವರು, ಚಿತ್ರದುರ್ಗ ರೂ, ೧೦- ಒಟ್ಟು ರೂ. ೮೦.

ಅನುಷ್ಠಾನನಿಧಿಗೆ: ಶ್ರೀ ಎ.ವಿ. ಬಾಲಸುಬ್ರಹ್ಮಣ್ಯಂ, ಬೊಂಬಾಯಿ. ರೂ. ೭೫.

ಆರಾಧನಾನಿಧಿಗೆ: ಮಿಸ್. ರತ್ನಾ ಎನ್. ರಾವ್, ಪುಣೆ ರೂ. ೧೦೦.

ಮೇಲ್ಕಂಡ ಮಹಾಶಯರುಗಳಿಗೆಲ್ಲ ನಮ್ಮ ಅಭಿನಂದನೆಗಳು.

---

# ಪ್ರಸ್ಥಾನತ್ರಯಭಾಷ್ಯಗಳು

ಅಧ್ಯಾತ್ಮಪ್ರಕಾಶಕಾರ್ಯಾಲಯದವರು ಕಳೆದ ಐದು ವರ್ಷಗಳಿಂದಲೂ ಪ್ರಯತ್ನಮಾಡಿ ಮಹಾಜನರ ಉದಾರಧನಸಹಾಯದಿಂದ ಈ ಹಿಂದೆ ಜಯಚಾಮರಾಜೇಂದ್ರಗ್ರಂಥರತ್ನಮಾಲೆಯಲ್ಲಿ ಪ್ರಕಾಶಿತವಾಗಿ-ಪ್ರತಿಗಳೆಲ್ಲ ಮುಗಿದುಹೋಗಿದ್ದ **ಶಾಂಕರಪ್ರಸ್ಥಾನತ್ರಯಭಾಷ್ಯಗಳನ್ನು** ಪುನರ್ಮುದ್ರಣಮಾಡಿಸಿ ಈಗ ಸಂಪೂರ್ಣವಾಗಿ ಹೊರತಂದಿರುತ್ತಾರೆ. ಕನ್ನಡಿಗರ ಸುದೈವದಿಂದ ಈ ಗ್ರಂಥಗಳು ಈಗ ಪೂರ್ಣವಾಗಿ ಸೆಟ್‌ಗಳಾಗಿ ದೊರೆಯುತ್ತಿವೆ. ಇವು **ಬ್ರಹ್ಮೀಭೂತ ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರ ಕನ್ನಡ ಅನುವಾದ ಟಿಪ್ಪಣಿ, ಪೀಠಿಕೆ, ಶಬ್ದಕೋಶಗಳಿಂದ ಅಲಂಕೃತವಾಗಿವೆ.** ವಿವರಗಳು ಕೆಳಗೆ ಕಂಡಂತೆ ಇವೆ.

| | | ಪುಟಗಳು | ಬೆಲೆ |
|---|---|---|---|
| ೧. | ಈಶಾವಾಸ್ಯೋಪನಿಷದ್ಭಾಷ್ಯ | 72 | ರೂ. 4-00 |
| ೨. | ಕೇನೋಪನಿಷದ್ಭಾಷ್ಯ | 118 | 8-00 |
| ೩. | ಕಾಠಕೋಪನಿಷದ್ಭಾಷ್ಯ | 228 | 10-00 |
| ೪. | ಮುಂಡಕೋಪನಿಷದ್ಭಾಷ್ಯ | 188 | 10-00 |
| ೫. | ಪ್ರಶ್ನೋಪನಿಷದ್ಭಾಷ್ಯ | 186 | 10-00 |
| ೬. | ಮಾಂಡೂಕ್ಯೋಪನಿಷದ್ಭಾಷ್ಯ | 424 | 20-00 |
| ೭. | ಐತರೇಯೋಪನಿಷದ್ಭಾಷ್ಯ | 146 | 8-00 |
| ೮. | ತೈತ್ತಿರೀಯೋಪನಿಷದ್ಭಾಷ್ಯ | 356 | 12-00 |
| ೯. | ಛಾಂದೋಗ್ಯೋಪನಿಷದ್ಭಾಷ್ಯ | 1158 | 120-00 |
| ೧೦. | ಬೃಹದಾರಣ್ಯಕೋಪನಿಷದ್ಭಾಷ್ಯ (೨ ಸಂಪುಟಗಳು) | 1828 | 200-00 |
| ೧೧. | ಭಗವದ್ಗೀತಾಭಾಷ್ಯ | 1048 | 60-00 |
| ೧೨. | ಬ್ರಹ್ಮಸೂತ್ರಭಾಷ್ಯ (೨ ಸಂಪುಟಗಳು) | 2020 | 150-00 |
| | | | ರೂ. 612-00 |

**ವಿಶೇಷ:** ಬ್ರಹ್ಮಸೂತ್ರಭಾಷ್ಯ, ಬೃಹದಾರಣ್ಯಕೋಪನಿಷದ್ಭಾಷ್ಯ, ಛಾಂದೋಗ್ಯೋಪನಿಷದ್ಭಾಷ್ಯಗಳನ್ನು ಅಂದವಾದ ರಕ್ಷಾಕವಚ, ಪ್ಲಾಸ್ಟಿಕ್ ಹೊದಿಕೆಗಳಿಂದ ಅಲಂಕರಿಸಿದೆ. ಒಂದು ಪೂರ ಸೆಟ್ಟನ್ನು ಒಟ್ಟಿಗೆ ಕೊಳ್ಳುವವರಿಗೆ **ಕೇವಲ 500-00 ರೂಗಳಿಗೆ** ಕೊಡಲಾಗುವದು. ಅಂಚೆವೆಚ್ಚ-ಮುಂತಾದವುಗಳನ್ನು ನಾವೇ ಭರಿಸುವೆವು. ಹೆಚ್ಚಿನ ವಿವರಗಳಿಗೆ ಕೆಳಗಿನ ವಿಳಾಸಕ್ಕೆ ಬರೆಯಿರಿ.

ಕಾರ್ಯದರ್ಶಿ,

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ.

॥ ಓಂ ॥

# ಮಹಾನಾರಾಯಣೋಪನಿಷತ್ತು

(ಕನ್ನಡ ವಿವರಣೆಯೊಡನೆ)

ನಾರಾಯಣಂ ಮಹಾಜ್ಞೇಯಂ ಸಚ್ಚಿದಾನಂದಮದ್ವಯಮ್ ।
ವಾಸುದೇವಂ ಜಗದ್ಯೋನಿಂ ನೌಮಿ ಸದ್ಗುರುರೂಪಿಣಮ್ ॥

## ಪೀಠಿಕೆ

ಯಜುರ್ವೇದದ ತೈತ್ತಿರೀಯಶಾಖೆಗೆ ಸೇರಿದ ಆರಣ್ಯಕಭಾಗದಲ್ಲಿರುವ ಮಹಾನಾರಾಯಣೋಪನಿಷತ್ತು ಅಧ್ಯಯನಪ್ರವಚನಗಳಿಗೆ ತಕ್ಕದ್ದಾಗಿದ್ದು ಅರ್ಥಾನುಸಂಧಾನಕ್ಕೂ ಯೋಗ್ಯವಾಗಿದೆ. ಈ ಉಪನಿಷತ್ತಿನ ವಾಕ್ಯಗಳನ್ನು ಶ್ರೀಶಂಕರಭಗವತ್ಪಾದರು ತಮ್ಮ ಪ್ರಸ್ಥಾನತ್ರಯಭಾಷ್ಯಗಳಲ್ಲಿ ಅಲ್ಲಲ್ಲಿ ಪ್ರಮಾಣ ವಚನಗಳಾಗಿ ಉದಾಹರಿಸಿರುತ್ತಾರೆ. ಇದಕ್ಕೆ ಸಾಯಣಾಚಾರ್ಯವಿರಚಿತ ಭಾಷ್ಯವಿದೆ. ವೈದಿಕರು ಈ ಉಪನಿಷತ್ತನ್ನು ದೇವಾಲಯಗಳಲ್ಲಿ ವಿಶೇಷೋತ್ಸವ, ರಥೋತ್ಸವಾದಿಸಂದರ್ಭಗಳಲ್ಲಿ ವೇದಪಾರಾಯಣಕ್ಕಾಗಿ ಬಳಸುತ್ತಾರೆ. ಇದರ ಕೆಲವು ಮಂತ್ರಗಳನ್ನು ಸಮಯಾನುಸಾರ ಸ್ವಸ್ತಿವಾಚನ, ಮಂತ್ರಪುಷ್ಪ, ಅಷ್ಟಾವಧಾನಸೇವೆಗಳಲ್ಲೂ ಭೋಜನಸಮಯದಲ್ಲಿಯೂ ಬಳಸುವದುಂಟು. ಹೀಗೆ ಈ ವೇದಭಾಗವು ಉಳಿದ ವೇದಭಾಗಗಳಿಗಿಂತ ಹೆಚ್ಚಾಗಿ ಜನರ ಬಾಯಲ್ಲಿ ನಲಿದಾಡುತ್ತಿದೆ. ಆದರೆ ಈ ಉಪನಿಷತ್ತಿಗೆ ಕನ್ನಡವಿವರಣೆಯು ಎಲ್ಲಿಯೂ ಕಂಡುಬಂದಿಲ್ಲ. ಅಧ್ಯಯನಶೀಲರಿಗೂ ಉಳಿದ ಆಸ್ತಿಕಮಹಾಜನರಿಗೂ ಈ ವೇದ ಭಾಗದ ಅರ್ಥವೂ ತಿಳಿದಿದ್ದರೆ ಹೆಚ್ಚು ಪ್ರಯೋಜನಕರವಾದೀತೆಂದು ಭಾವಿಸಿ ನಾನು ಈ ವಿವರಣೆಯನ್ನು ಬರೆಯಲು ಪ್ರಾರಂಭಿಸಿದ್ದೇನೆ. ಈವರೆಗೆ ಕೆಲವು ವೇದಮಂತ್ರಗಳಿಗೂ ಸೂಕ್ತಗಳಿಗೂ ವಿವರಣೆಯನ್ನು ಬರೆದಿರುವ ರೀತಿಯಲ್ಲೇ ಸರಳವಾಗಿಯೂ ಸರ್ವಸಮ್ಮತವಾಗಿಯೂ ಅಧ್ಯಾತ್ಮವಿಚಾರಪ್ರಧಾನವಾಗಿಯೂ ಇರುವಂತೆ ವಿವರಣೆಯನ್ನು ರೂಪಿಸಿದ್ದೇನೆ. ವೇದಾಧ್ಯಯನಕ್ಕೆ ಅವಕಾಶ ವಿಲ್ಲದವರು ಕೂಡ ಈ ಮಂತ್ರಗಳ ಅರ್ಥಾನುಸಂಧಾನದಿಂದ ತಮ್ಮ ಬ್ರಹ್ಮ ವಿದ್ಯೆಯ ಮಟ್ಟವನ್ನು ಹೆಚ್ಚಿಸಿಕೊಳ್ಳಬಹುದು. ಹಾಗೂ ಸಾಧನಮಾರ್ಗದಲ್ಲಿ ಸೂಕ್ತಮಾರ್ಗದರ್ಶನವನ್ನು ಹೊಂದಬಹುದು. ಹೀಗೆ ಅಧ್ಯಾತ್ಮವಿದ್ಯಾಪ್ರೇಮಿ ಗಳೆಲ್ಲರಿಗೂ ಈ ವಿವರಣವು ಉಪಯುಕ್ತವಾದೀತೆಂದು ಭಾವಿಸಿದ್ದೇನೆ.

ಈ ಉಪನಿಷತ್ತಿನಲ್ಲಿರುವ ಮಂತ್ರಗಳು ಅರ್ಥದೃಷ್ಟಿಯಿಂದ ವಿಷಯ ಪ್ರಧಾನವಾಗಿ ಒಂದು ಕ್ರಮದಲ್ಲಿ ಜೋಡಿಸಲ್ಪಟ್ಟಿಲ್ಲ. ಆದ್ದರಿಂದ ಪ್ರತಿಯೊಂದು

ಅನುವಾಕವೂ ಸ್ವತಂತ್ರವೇ ಎಂದು ಹೇಳಬಹುದು. ಆದರೆ ಅಧ್ಯಯನಪರಂಪರೆಯು ಪ್ರಾಚೀನವಾಗಿ ಯಾವ ರೀತಿಯಲ್ಲಿ ಅನುಕ್ರಮವಾಗಿ ಬಂದಿದೆಯೋ ಅದೇ ರೀತಿಯಲ್ಲೇ ಭಾಷ್ಯಕಾರರೂ ವ್ಯಾಖ್ಯಾನಮಾಡಿರುವದರಿಂದ ನಾನೂ ಆ ಕ್ರಮವನ್ನೇ ಅನುಸರಿಸಿರುತ್ತೇನೆ. ಇದರಲ್ಲಿರುವ ಪಾಠಪ್ರಭೇದಗಳಂತೆ ಆಂಧ್ರ ಪಾಠವು ಎಂಭತ್ತು ಅನುವಾಕಗಳಿಂದ ಕೂಡಿದೆ. ದ್ರಾವಿಡಪಾಠದಲ್ಲಿ ಅರುವತ್ತು ನಾಲ್ಕು ಅನುವಾಕಗಳಿವೆ. ಭಾಷ್ಯಕಾರರು ದ್ರಾವಿಡಪಾಠವನ್ನೇ ಅನುಸರಿಸಿದ್ದಾರೆ. ಆದರೆ ಆಂಧ್ರಪಾಠವಂತೆಯೂ ಭಾಷ್ಯವೊಂದು ದೊರೆತಿರುತ್ತದೆ. ಅದನ್ನೂ ಆನಂದಾಶ್ರಮ, ಪೂನಾದವರು ಪ್ರಕಾಶಗೊಳಿಸಿದ್ದಾರೆ. ಅದು ಯಾರ ಕೃತಿಯೆಂಬುದು ಮಾತ್ರ ತಿಳಿದಿಲ್ಲ. ಇರಲಿ. ಮಂತ್ರಾರ್ಥಗಳನ್ನು ತಿಳಿಯಲು ಹೀಗೆ ಅವಕಾಶವು ದೊರೆತಿರುವದರಿಂದ ನಾನು ವಿವರಣೆಗೆ ಆಂಧ್ರಪಾಠವನ್ನೇ ಆರಿಸಿಕೊಂಡಿದ್ದೇನೆ.

ಅಧ್ಯಾತ್ಮವಿದ್ಯೆಯನ್ನು ಸರಹಸ್ಯವಾಗಿ ವಿವರಿಸುವ ಉಪನಿಷತ್ತುಗಳು ಕರ್ಮ, ಉಪಾಸನೆ, ಜ್ಞಾನ- ಎಂಬ ಸಾಧನತ್ರಯಗಳನ್ನೂ ಮೋಕ್ಷವೆಂಬ ಫಲವನ್ನೂ ಕುರಿತು ವಿಚಾರಮಾಡಿರುತ್ತವೆ. ಕೆಲವು ಉಪನಿಷತ್ತುಗಳು ಕೇವಲ ಜ್ಞಾನಪ್ರಧಾನವಾಗಿರುವವು. ಇನ್ನು ಕೆಲವು ಉಪಾಸನೆ, ಜ್ಞಾನ- ಎರಡನ್ನೂ ಒಳಗೊಂಡಿರುವವು. ಈ ಉಪನಿಷತ್ತಾದರೋ, ಸಾಧನತ್ರಯಗಳನ್ನೂ ಮುಕ್ತಿಯೆಂಬ ಫಲವನ್ನೂ ಪೂರ್ಣವಾಗಿ ಒಳಗೊಂಡಿದೆ. ಅದರಲ್ಲಿಯೂ ಕ್ರಮಮುಕ್ತಿ, ದೇವಯಾನ, ಪಿತೃಯಾಣಮಾರ್ಗಗಳ ವಿಚಾರ, ಸದ್ಯೋಮುಕ್ತಿ- ಇತ್ಯಾದಿ ವಿಷಯಗಳೆಲ್ಲವೂ ಸಂದರ್ಭಾನುಸಾರವಾಗಿ ಇದರಲ್ಲಿ ಅಡಕವಾಗಿದೆ. ಆದ್ದರಿಂದ ಇಲ್ಲಿರುವ ಎಲ್ಲಾ ವಿಚಾರಗಳನ್ನೂ ಶಾಸ್ತ್ರೀಯವಾಗಿಯೂ ಕ್ರಮಬದ್ಧವಾಗಿಯೂ ಪರಸ್ಪರಸಂಬಂಧವುಳ್ಳದ್ದಾಗಿಯೂ ಇರುವಂತೆ ತಿಳಿಸಬೇಕಾದರೆ ಶ್ರೀ ಶಂಕರಭಗವತ್ಪಾದರ ಪ್ರಸ್ಥಾನತ್ರಯಭಾಷ್ಯಗಳಲ್ಲಿರುವ ವಿಚಾರಸರಣಿಯನ್ನೇ ಅವಲಂಬಿಸಬೇಕಾಗುವದು. ಇಲ್ಲವಾದರೆ ಸಮನ್ವಯವು ಸಿಗುವದಿಲ್ಲ. ಕೇವಲ ಕರ್ಮಕಾಂಡಪರವಾಗಿಯೊ, ಕರ್ಮೋಪಾಸನಾಸಮುಚ್ಚಯಪರವಾಗಿಯೊ- ಅರ್ಥಮಾಡಿದರೆ ಇದರ ಏಕದೇಶವನ್ನು ಮಾತ್ರ ಗ್ರಹಿಸಿದಂತಾಗುವದು. ವೇದಾರ್ಥವನ್ನು ಯಾಜ್ಞಿಕ, ದೈವಿಕ, ಆಧ್ಯಾತ್ಮಿಕ- ಎಲ್ಲಾ ದೃಷ್ಟಿಕೋನಗಳಿಂದ ವಿವರಿಸಿ ಪರಸ್ಪರಸಂಬಂಧವನ್ನೂ ಒಂದಕ್ಕಿಂತ ಮತ್ತೊಂದರ ಹೆಚ್ಚುಗಾರಿಕೆಯನ್ನೂ ಪರಮತಾತ್ಪರ್ಯವನ್ನೂ ನಿಸ್ಸಂಶಯವಾಗಿ ತಿಳಿಯಬೇಕೆನ್ನುವವರು ಶಾಂಕರಭಾಷ್ಯವಿಚಾರಸರಣಿಯನ್ನೇ ಅನುಸರಿಸಬೇಕು.

## ಬ್ರಹ್ಮಪ್ರತಿಪಾದಕಮಂತ್ರಗಳು

ಓಂ॥ ಸಹ ನಾವವತು। ಸಹ ನೌ ಭುನಕ್ತು। ಸಹ ವೀರ್ಯಂ ಕರವಾವಹೈ।
ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ। ಓಂ ಶಾಂತಿಃ ಶಾಂತಿಃ ಶಾಂತಿಃ।

ತೈತ್ತಿರೀಯೋಪನಿಷತ್ತಿನ ನಾಲ್ಕನೆಯ ಪ್ರಶ್ನವು ಇದೆಂದು ಅಧ್ಯಯನ ನಿಷ್ಣಾತರು ಗೊತ್ತುಪಡಿಸಿರುತ್ತಾರೆ. ಆದ್ದರಿಂದ ಇದರ ಹಿಂದಿನ ಪ್ರಶ್ನಗಳಾದ ಆನಂದವಲ್ಲಿ, ಭೃಗುವಲ್ಲಿಗಳಂತೆಯೇ ಇದಕ್ಕೂ 'ಸಹ ನಾವವತು' ಎಂಬಿದೇ ಶಾಂತಿಪಾಠವಾಗಿದೆ. "ಬ್ರಹ್ಮವು ನಮ್ಮಿಬ್ಬರನ್ನೂ (ಆಚಾರ್ಯ-ಶಿಷ್ಯ) ಕಾಪಾಡಲಿ. ನಾವು ಜೊತೆಯಲ್ಲಿಯೇ ಬ್ರಹ್ಮವಿದ್ಯಾಫಲವನ್ನು ಅನುಭವಿಸುವಂತಾಗಲಿ! ಮುಂದೆಯೂ ವಿದ್ಯೆಯ ಸಾಮರ್ಥ್ಯವನ್ನು ಒಟ್ಟಾಗಿಯೇ ಹೊಂದುವಂತಾಗಲಿ ! ನಾವಿಬ್ಬರೂ ಅಧ್ಯಯನಮಾಡಿದ್ದು ತೇಜಸ್ವಿಯಾಗಲಿ ! ಆಧ್ಯಾತ್ಮಿಕಾದಿ ತಾಪತ್ರಯಗಳು ಶಾಂತವಾಗಲಿ"- ಎಂದು ಪ್ರಾರಂಭದಲ್ಲಿ ಪ್ರಾರ್ಥಿಸಲಾಗಿದೆ. ಅನಂತರ ಉಪನಿಷತ್ತು ಆರಂಭವಾಗಿದೆ. ಮೊದಲಿಗೆ ಪರಬ್ರಹ್ಮಪ್ರತಿಪಾದಕವಾದ ಮಂತ್ರಗಳು ಇವೆ. ಮೊದಲನೆಯ ಅನುವಾಕದ ಮೊದಲನೆಯ ಮಂತ್ರವಿದು:

**ಓಂ ॥ ಅಂಭಸ್ಯ ಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ**
**ಮಹತೋ ಮಹೀಯಾನ್ । ಶುಕ್ರೇಣ ಜ್ಯೋತೀಗ್ಂಷಿ**
**ಸಮನುಪ್ರವಿಷ್ಟಃ ಪ್ರಜಾಪತಿಶ್ಚರತಿ ಗರ್ಭೇ ಅಂತಃ ।೧॥**

ಬ್ರಹ್ಮವನ್ನು 'ಮಹತೋ ಮಹೀಯಾನ್' ಎಂದು ಇಲ್ಲಿ ವರ್ಣಿಸಿದೆ. ಕಠೋಪನಿಷತ್ತಿನಲ್ಲಿಯೂ (೨-೨೦ರಲ್ಲಿ) ಹೀಗೆಯೇ ಹೊಗಳಿದೆ. ವಿಶೇಷವೇನೆಂದರೆ ಯಾವಯಾವದಕ್ಕಿಂತ ದೊಡ್ಡದು ಎಂಬುದನ್ನು ಇಲ್ಲಿ ಎತ್ತಿ ಹೇಳಿದೆ. 'ಅಂಭಸ್ಯ' ಎಂದರೆ ಬಹಳವಾದ ನೀರಿನಿಂದ ತುಂಬಿ ಅಗಾಧವಾಗಿರುವ ಸಮುದ್ರವು ಏನಿದೆಯೋ ಅದರ ದಡದಲ್ಲಿರುವ ಮಹತ್ತರವಾದ ಲೋಕಾಲೋಕ ಪರ್ವತಗಳೇ ಮುಂತಾದ ದೊಡ್ಡ ಬೆಟ್ಟಗಳಿವೆಯೋ ಅವುಗಳಿಗಿಂತ ದೊಡ್ಡದಾಗಿರುವದು ಬ್ರಹ್ಮವು-ಎಂದು ಅರ್ಥ. ಹಾಗೆಯೇ ಭುವನಗಳೆಂದರೆ ಪೃಥಿವಿಯೇ ಮುಂತಾದ ಲೋಕಗಳು. ಈ ಮಹಾಲೋಕಗಳ ನಡುವೆ ಇರುವ ಮೇರು, ಸುಮೇರು ಮುಂತಾದ ಪರ್ವತಗಳಿಗಿಂತ ದೊಡ್ಡದು ಬ್ರಹ್ಮವು- ಎಂದು ಅಭಿಪ್ರಾಯ. ಇನ್ನೂ ಮುಂದುವರೆದು ನಾಕವೆಂದರೆ ಸ್ವರ್ಗದ ಪೃಷ್ಠೇ-ಮೇಲ್ಭಾಗದಲ್ಲಿಯೂ ಇರುವ ಬ್ರಹ್ಮಲೋಕಾದಿಗಳಿವೆಯಲ್ಲವೆ, ಅವುಗಳಿಗಿಂತಲೂ ಮಹತ್ತರನಾದವನು ಪರಮಾತ್ಮನು- ಎಂದು ಹೊಗಳಲಾಗಿದೆ. ಛಾಂದೋಗ್ಯೋಪನಿಷತ್ತಿನ ಒಂದು ಮಂತ್ರ (೩-೧೪-೩) ದಲ್ಲಿ 'ಈ ಆತ್ಮನು ಪೃಥಿವಿ

ಗಿಂತಲೂ, ಅಂತರಿಕ್ಷಕ್ಕಿಂತಲೂ, ದ್ಯುಲೋಕಕ್ಕಿಂತಲೂ ಈ ಎಲ್ಲಾ ಲೋಕಗಳಿಗಿಂತಲೂ ದೊಡ್ಡವನು– ಎಂದೇ ಚಿಂತಿಸಬೇಕೆಂದು ತಿಳಿಸಿದೆ. ಅದೇ ಅಭಿಪ್ರಾಯವು ಇಲ್ಲಿಯೂ ಇದೆ.

ಈಗ ಮಂತ್ರದ ಉತ್ತರಾರ್ಧವನ್ನು ವಿಚಾರಮಾಡೋಣ. ಆ ಪರಮಾತ್ಮನು ಶುಕ್ರೇಣ– ಎಂದರೆ ಎಲ್ಲವನ್ನೂ ಬೆಳಗುವ ಜೀವಚೈತನ್ಯರೂಪದಿಂದ ಜ್ಯೋತೀಂಷಿ– ಎಂದರೆ ನಿರ್ಮಲವಾದ ಅಂತಃಕರಣಗಳನ್ನು ಪ್ರವೇಶಮಾಡಿದವನಾಗಿ ಗರ್ಭೇ-ಎಂದರೆ ಬ್ರಹ್ಮಾಂಡದ ಒಳಗೆಲ್ಲ ವ್ಯಾಪಿಸಿಕೊಂಡು ಪ್ರಜಾಪತಿಯಾಗಿ ವಿರಾಡ್ರೂಪದಿಂದ ಚರತಿ– ಇದ್ದುಕೊಂಡಿರುತ್ತಾನೆ– ಎಂದು ತಿಳಿಸಿದೆ. ಪರಮಾತ್ಮನು ಜೀವರೂಪದಿಂದ ಪ್ರವೇಶಿಸುವದೆಂದರೆ ಹೃದಯದಲ್ಲಿ ಕಂಡುಬರುವದೇ ಆಗಿದೆ. ಏಕೆಂದರೆ ಮುಖ್ಯಾರ್ಥವು ಹೊಂದುವದಿಲ್ಲ. ಪರಿಚ್ಛಿನ್ನಪದಾರ್ಥವಾದರೆ, ದೇಶಕಾಲಗಳಲ್ಲಿದ್ದರೆ– ಹೇಗೆ ಇಲಿಯು ಬಿಲವನ್ನು ಹೊಕ್ಕಿತು ಎನ್ನುವೆವೋ ಹಾಗೆ ಪರಮಾತ್ಮನೂ ಜಗತ್ತನ್ನು ಹೊಕ್ಕನು– ಎನ್ನಬಹುದು. ಇಲ್ಲಿ ಹಾಗೆ ಹೇಳಲು ಬರುವದಿಲ್ಲ. ಪ್ರವೇಶಮಾಡುವದಕ್ಕೆ ಮೊದಲೇ ಎಲ್ಲೆಲ್ಲಿಯೂ ಪರಮಾತ್ಮನೇ ವ್ಯಾಪಿಸಿಕೊಂಡಿರುತ್ತಾನೆ. ಅವನಿಲ್ಲದ ಜಾಗವೇ ಇಲ್ಲ. ಆದ್ದರಿಂದ ಅಂತಃಕರಣದಲ್ಲಿ ಆತನ ಚೈತನ್ಯವು ಪ್ರತಿಬಿಂಬಿಸಿರುವದೇ ಪ್ರವೇಶವು –ಎಂದರೆ ಉಪಚಾರಕ್ಕಾಗಿ ಹಾಗೆ ಹೇಳಿದೆ. ಆದರೆ ಈ ಪ್ರವೇಶವು ಸಾಮಾನ್ಯರ ದೃಷ್ಟಿಯಿಂದ ಅತ್ಯಾಶ್ಚರ್ಯಕರವಾಗಿದೆ. ದೇವಾಸುರನರತಿರ್ಯಗಾದಿ ಅನೇಕ ವಿಧವಾದ ಶರೀರಗಳನ್ನು ಜೀವಾತ್ಮರೂಪದಿಂದ ಹೊಕ್ಕು ಬೆಳಗುತ್ತಿರುವ ಈತನನ್ನು ವಿರಾಟ್– ಎಂದೂ ಪ್ರಜಾಪತಿಯೆಂದೂ ಸ್ತೋತ್ರಮಾಡಿದೆ. ವಿವಿಧಂ ರಾಜತೇ ಇತಿ ವಿರಾಟ್– ಎಂಬಂತೆ ನಾನಾವಿಧವಾಗಿ ನಾನಾ ನಾಮರೂಪಗಳಿಂದ ಭಗವಂತನೊಬ್ಬನೇ ಎಲ್ಲೆಲ್ಲೂ ಕಂಡುಬರುತ್ತಿರುವನು. ಈ ವಿರಾಡ್ರೂಪವು ಗೀತೆಯಲ್ಲಿ ಚೆನ್ನಾಗಿ ವರ್ಣಿಸಲ್ಪಟ್ಟಿದೆ. ಈ ವಿರಾಡಾತ್ಮನನ್ನೇ ಪ್ರಜಾಪತಿಯೆಂದೂ ಕರೆಯುವರು. ಆತನು ಪ್ರಜೆಗಳೆಲ್ಲರಿಗೂ ಒಡೆಯನು. ಇಂಥ ವಿರಾಡ್ರೂಪನಾದ ಭಗವಂತನಿಗೆ ಅಗ್ನಿಯೇ ತಲೆಯು ; ಸೂರ್ಯಚಂದ್ರರು ಕಣ್ಣುಗಳು ; ದಿಕ್ಕುಗಳೇ ಕಿವಿಗಳು ; ವೇದಗಳೇ ಬಾಯಿಯು ; ವಾಯುವೇ ಪ್ರಾಣನು ; ವಿಶ್ವವೇ ಹೃದಯವು ; ಭೂಮಿಯೇ ಕಾಲುಗಳು. ಸರ್ವಭೂತಗಳ ಅಂತರಾತ್ಮನಾದ ಈ ಪ್ರಜಾಪತಿಯು ತಾನೇ ಎಲ್ಲವೂ ಆಗಿಬಿಟ್ಟಿರುವನು– ಎಂದು ಮುಂಡಕೋಪನಿಷತ್ತಿನಲ್ಲಿಯೂ ತಿಳಿಸಿದೆ. ಉಪಾಧಿ ವಿಶಿಷ್ಟವಾಗಿ ವರ್ಣಿಸಿದ್ದರೂ ಉಪಹಿತಚೈತನ್ಯವನ್ನೇ ವಿವಕ್ಷೆಮಾಡಿದಾಗ ನಿರ್ವಿಶೇಷಪರಬ್ರಹ್ಮದಲ್ಲಿಯೂ ಈ ಮಂತ್ರವು ಸಮನ್ವಯವಾಗುತ್ತದೆ. ಸಾಮಾನ್ಯರಿಗೆಲ್ಲ ಉಪಾಧಿವಿಶಿಷ್ಟರೂಪವೇ ಧ್ಯೇಯವಾಗಿರುತ್ತದೆ.

**ಯಸ್ಮಿನ್ನಿದಗ್‍ಂ ಸಂ ಚ ವಿಚೈತಿ ಸರ್ವಂ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ । ತದೇವ ಭೂತಂ ತದು ಭವ್ಯಮಾ ಇದಂ ತದಕ್ಷರೇ ಪರಮೇ ವ್ಯೋಮನ್ ।೨॥**

ಈ ಮಂತ್ರದಲ್ಲಿ ಜಗತ್ಕಾರಣವಾದ ಅವ್ಯಾಕೃತತತ್ತ್ವವನ್ನು ಪ್ರಸ್ತಾಪಿಸಿ ಆ ಅವ್ಯಾಕೃತವೂ ಯಾವ ಬ್ರಹ್ಮದಲ್ಲಿದ್ದುಕೊಂಡಿದೆಯೋ ಅದೇ ಪರಮತತ್ತ್ವವು ಎಂದು ತಿಳಿಸಿದೆ. ಇದಂ- ಎಂದರೆ ನಾಮರೂಪಗಳಿಂದ ಬಿಡಿಬಿಡಿಯಾಗಿ ತೋರುತ್ತಿರುವ ವ್ಯಾಕೃತಪ್ರಪಂಚವು. ಇದು ಇಂದ್ರಿಯಗೋಚರವಾಗಿರುತ್ತದೆ. ಇದಕ್ಕೆ ಕಾರಣವಾಗಿರುವ ಅವ್ಯಾಕೃತವು ವ್ಯವಹಾರಗೋಚರವಲ್ಲ. ಆದರೆ ಅನುಮೇಯವಾಗಿರುತ್ತದೆ. ಹೇಗೆ ಒಂದು ಮರವನ್ನು ನೋಡಿದಾಗ ಅದು ಒಂದು ಬೀಜದಿಂದ ಹುಟ್ಟಿದೆ- ಎಂಬಿದು ನಿಜ. ಆದರೆ ಮರವನ್ನು ನೋಡುತ್ತಿರುವಾಗ ಬೀಜವು ಕಾಣಿಸುವದಿಲ್ಲ. ಆದರೂ ಮರಕ್ಕಿಂತ ಮುಂಚೆಯೇ ಅದು ಇದ್ದುಕೊಂಡಿರಬೇಕು- ಎಂದು ಊಹಿಸಬಹುದಾಗಿದೆ. ಹಾಗೆಯೇ ಈ ಜಗತ್ತೆಲ್ಲವೂ ಸೃಷ್ಟಿಗೆ ಮುಂಚೆ ಬೀಜರೂಪದಿಂದ ಇದ್ದುಕೊಂಡಿರಲೇಬೇಕಲ್ಲವೆ ? ಅದನ್ನು ಅವ್ಯಾಕೃತವೆನ್ನುವರು. ಅದನ್ನು ಕುರಿತು ಇಲ್ಲಿ ಪ್ರಸ್ತಾಪಮಾಡಿದೆ. ಯಾವ ಅವ್ಯಾಕೃತಬೀಜದಲ್ಲಿ ಈ ಬ್ರಹ್ಮಾಂಡವು ಅಡಗಿದ್ದು ಸೃಷ್ಟಿಕಾಲಕ್ಕೆ ಹೊರ ತೋರಿಕೊಂಡಿತೋ ಈಗಲೂ ಸದನುಗತವಾಗಿ ಇದ್ದುಕೊಂಡಿದೆಯೋ ಮತ್ತೆ ಪ್ರಲಯದಲ್ಲಿ ಅದರಲ್ಲಿಯೇ ಒಂದಾಗುವದೋ ಆ ಅವ್ಯಾಕೃತವು ಜಗತ್ಕಾರಣವಾಗಿದೆ- ಎಂದರ್ಥ. ಮತ್ತು ಅದನ್ನಾಶ್ರಯಿಸಿಯೇ ಎಲ್ಲಾ ದೇವತೆಗಳೂ ಇದ್ದುಕೊಂಡಿರುವರು. ಹಿಂದಿನಕಾಲ, ಈಗಿನಕಾಲ, ಭವಿಷ್ಯತ್ಕಾಲಗಳೂ ಕಾಲಾಂತರ್ಗತವಸ್ತುಗಳೂ ಆ ಅವ್ಯಾಕೃತಕ್ಕಿಂತ ಬೇರೆಯಾಗಿಲ್ಲವಾದ್ದರಿಂದ ಅದೇ ಎಲ್ಲವೂ ಆಗಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಇದನ್ನು 'ಆಕಾಶ'ವೆಂದು ಕರೆದಿದ್ದಾರೆ. ಈ ಆಕಾಶವು ಅಕ್ಷರ(ವೆಂಬ ಪರಬ್ರಹ್ಮ)ದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡಿದೆ- ಎಂದೂ ಅಲ್ಲಿ ತಿಳಿಸಿದೆ. ಇಲ್ಲಿಯೂ ಹಾಗೆಯೇ ವರ್ಣನೆಮಾಡಿದೆ. ಈವರೆಗೆ ವರ್ಣಿಸಲ್ಪಟ್ಟ ಅವ್ಯಾಕೃತವು ಅಕ್ಷರನೆಂಬ ಪರಮವ್ಯೋಮವನ್ನು ಆಶ್ರಯಿಸಿರುತ್ತದೆ. ಆದ್ದರಿಂದ ಆ ವ್ಯೋಮವು ಎಂಥ ಸೂಕ್ಷ್ಮವಾಗಿದ್ದಿರಬಹುದು ? ಎಂದಭಿಪ್ರಾಯ. ಋಗ್ವೇದದ 'ಋಚೋ ಅಕ್ಷರೇ ಪರಮೇ' (೨-೩-೨೩) ಎಂಬ ಮಂತ್ರಾಭಿಪ್ರಾಯವನ್ನೂ ಇಲ್ಲಿ ಅನುಸಂಧಾನ ಮಾಡಿಕೊಳ್ಳಬಹುದು. ಪರಬ್ರಹ್ಮವನ್ನರಿಯುವದು ಸಾಮಾನ್ಯವಲ್ಲ. ವ್ಯಾಕೃತಾವ್ಯಾಕೃತಗಳ ಎಲ್ಲೆಕಟ್ಟನ್ನೂ ಮೀರಿ ಅವುಗಳಿಗೂ ವಿಲಕ್ಷಣವಾಗಿರುವ ಬ್ರಹ್ಮವು ದೇಶಕಾಲಾದಿಸವ್ಯಪೇಕ್ಷವಾದ ವ್ಯಾಕೃತಪ್ರಪಂಚಕ್ಕೂ, ನಿರಪೇಕ್ಷವಾದ ಅವ್ಯಾಕೃತಪ್ರಪಂಚಕ್ಕೂ ಮಿಗಿಲಾದದ್ದಾಗಿರುವದು- ಎಂದಭಿಪ್ರಾಯ.

**ಯೇನಾವೃತಂ ಖಂ ಚ ದಿವಂ ಮಹೀಂ ಚ ಯೇನಾದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ । ಯಮಂತಃಸಮುದ್ರೇ ಕವಯೋ ವಯಂತಿ ಯದಕ್ಷರೇ ಪರಮೇ ಪ್ರಜಾಃ ॥೩॥**

ಈ ಮಂತ್ರದಲ್ಲಿ ಅವ್ಯಾಕೃತೋಪಹಿತವಾದ ಬ್ರಹ್ಮವನ್ನು ತಿಳಿಸಿದೆ. ಬ್ರಹ್ಮವು ಯಾವಾಗಲೂ ಚೈತನ್ಯರೂಪವು. ಯಾವಾಗಲೂ ಇದ್ದುಕೊಂಡಿರುವದು. ಹಾಗೂ ಎಲ್ಲೆಕಟ್ಟುಗಳಿಲ್ಲದ್ದಾಗಿರುವದು. ಈ ಮೂರು ವಿಶೇಷಣಗಳನ್ನೂ ಸೇರಿಸಿ ಸಚ್ಚಿದನಂತರೂಪವಾದ ಬ್ರಹ್ಮವು ಪರಮಾರ್ಥವು- ಎಂದು ವೇದಾಂತಗಳಲ್ಲಿ ತಿಳಿಸಿರುತ್ತದೆ. ತನ್ನ ಸಚ್ಚಿದ್ರೂಪದಿಂದಲೇ ಅಂತರಿಕ್ಷವನ್ನೂ, ಸ್ವರ್ಗಲೋಕವನ್ನೂ, ಭೂಲೋಕವನ್ನೂ ಬ್ರಹ್ಮವು ವ್ಯಾಪಿಸಿಕೊಂಡಿದೆ. ಕೇವಲ ಲೋಕಗಳನ್ನಷ್ಟೇ ಅಲ್ಲ. ಆಯಾ ಲೋಕಗಳಲ್ಲಿರುವ ಶರೀರಗಳನ್ನೆಲ್ಲ ಹೊಕ್ಕು ಎಲ್ಲವನ್ನೂ ವ್ಯಾಪಿಸಿಕೊಂಡಿದೆ. ಆದ್ದರಿಂದಲೇ ಯಾವ ವಸ್ತುವೇ ಆದರೂ ಇದೆ, ಬೆಳಗುತ್ತಿದೆ, ಪ್ರಿಯವಾಗಿದೆ- ಎಂದೇ ಬ್ರಹ್ಮಗುಣಗಳಿಂದ ಅನ್ವಿತವಾಗಿ ತೋರುತ್ತಿರುವದು. ಹಾಗೆಯೇ ಆಧಿದೈವಿಕಪ್ರಪಂಚಕ್ಕೆ ಸೇರಿದ ಶ್ರೇಷ್ಠಜ್ಯೋತಿಯಾದ ಸೂರ್ಯನು ಈ ಬ್ರಹ್ಮದ ಬೆಳಕಿನಿಂದಲೇ ಬೆಳಗುತ್ತಿರುವನು. ಮತ್ತು ತನ್ನ ರಶ್ಮಿಗಳನ್ನೆಲ್ಲ ಸುತ್ತಲೂ ಹರಡಿ ಪ್ರಕಾಶಗೊಳಿಸುತ್ತಿರುವನು. ಇನ್ನು ಕವಿಗಳು ಎಂದರೆ ಜ್ಞಾನಿಗಳು ಸಮುದ್ರದಂತೆ ವಿಶಾಲವಾಗಿರುವ ಇಡಿಯ ಬ್ರಹ್ಮಾಂಡದಲ್ಲೆಲ್ಲ ಆ ಚೈತನ್ಯವು- ಪಂಚೆಯನ್ನೆಲ್ಲ ನೂಲುಗಳು ಹಾಸುಹೊಕ್ಕಿರುವಂತೆ- ವ್ಯಾಪಿಸಿರುವದನ್ನು ಕಂಡುಕೊಂಡಿರುವರು. ಮತ್ತು ಆ ಬ್ರಹ್ಮವು ಪರಮವಾದ ತನ್ನ ಅಕ್ಷರಸ್ವರೂಪದಲ್ಲಿದ್ದುಕೊಂಡೇ ಏನೂ ಪರಿಣಾಮವಾಗದೆ ಪ್ರಜೆಗಳನ್ನೆಲ್ಲ ಉಂಟುಮಾಡುತ್ತಿರುವದು. ಇದು ಆ ಬ್ರಹ್ಮದ ವಿಚಿತ್ರಶಕ್ತಿಯೋಗವೇ ಸರಿ. ತಾನು ಎಲ್ಲಕ್ಕೂ ಆಧಾರವಾಗಿದ್ದರೂ ಅದು ತನಗೆ ಯಾವ ಆಧಾರವೂ ಇಲ್ಲದ್ದಾಗಿರುವದು. ಅಥವಾ ಸ್ವಮಹಿಮೆಯಲ್ಲಿಯೇ ನೆಲೆಗೊಂಡಿರುವದು. ಆಧಾರಾಧೇಯಭಾವವೆಂಬ ವಿಶೇಷವುಕೂಡ ಬ್ರಹ್ಮದಲ್ಲಿರುವದಿಲ್ಲ- ಎಂದಭಿಪ್ರಾಯ.

**ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ ವ್ಯಚಸರ್ಜ ಭೂಮ್ಯಾಮ್ । ಯದೋಷಧೀಭಿಃ ಪುರುಷಾನ್ ಪಶೂಗ್‌ಂಶ್ಚ ವಿವೇಶ ಭೂತಾನಿ ಚರಾಚರಾಣಿ ॥೪॥**

ಈ ಮಂತ್ರದಲ್ಲಿ ಬ್ರಹ್ಮವೇ ಪ್ರಪಂಚಕ್ಕೆ ಉಪಾದಾನಕಾರಣವೆಂದು ತಿಳಿಸಿದೆ. ಕಾರ್ಯಕಾರಣಪ್ರಕ್ರಿಯೆಯಲ್ಲಿ ಕಾರಣವನ್ನು ವಿವರಿಸುವಾಗ ನಿಮಿತ್ತ-ಉಪಾದಾನ ಎಂದು ವಿಂಗಡಿಸುವರು. ನಿಮಿತ್ತಕಾರಣವೆಂದರೆ ಅದಿಲ್ಲದೆ

ಕಾರ್ಯವುಂಟಾಗುವದಿಲ್ಲ ಎಂದರ್ಥ. ಹೇಗೆಂದರೆ ಮಣ್ಣಿದ್ದರೂ ಕುಂಬಾರನಿಲ್ಲದೆ ಮಡಕೆಯಾಗುವದಿಲ್ಲ- ಎಂದಂತೆ ತಿಳಿಯಬೇಕು. ಉಪಾದಾನವೆಂದರೆ ಅದೇ ಕಾರ್ಯವಾಗಿಬಿಡುವದು. ಹೇಗೆ ಮಣ್ಣೇ ಮಡಕೆಯಾಗುವದೋ ಹಾಗೆ- ಎಂದಭಿಪ್ರಾಯ. ಒಬ್ಬ ವ್ಯಕ್ತಿಯ ಹುಟ್ಟಿಗೆ ತಂದೆಯೂ ತಾಯಿಯೂ ಇಬ್ಬರೂ ಹೇಗೆ ಕಾರಣರೋ- ತಂದೆಯನ್ನು ನಿಮಿತ್ತಕಾರಣನೆಂದೂ ತಾಯಿಯನ್ನು ಉಪಾದಾನಕಾರಣವೆಂದೂ ಕರೆಯಬಹುದೋ ಹಾಗೆ ಪ್ರಪಂಚಕ್ಕೆಲ್ಲ ಬ್ರಹ್ಮವೇ ತಂದೆಯು. ಬ್ರಹ್ಮವೇ ತಾಯಿಯು. ಏಕೆಂದರೆ ಅದೊಂದೇ ಏಕವೂ ಅದ್ವಿತೀಯವೂ ಆಗಿದ್ದುಕೊಂಡಿರುವದು. 'ಆತ್ಮನಿಂದಲೇ ಆಕಾಶವುಂಟಾಯಿತು' ಎಂದು ತೈತ್ತಿರೀಯಬ್ರಹ್ಮವಲ್ಲಿಯಲ್ಲಿ ಹೇಳಿದೆ. ಹೀಗೆ ಉಪಾದಾನಕಾರಣವೂ ಆದ ಬ್ರಹ್ಮದಿಂದ ಜಗತ್ತಿನ ಸೃಷ್ಟಿಯು ಹೊರಹೊಮ್ಮಿತು. ಆ ಕಾರಣವೆನಿಸಿದ ಬ್ರಹ್ಮವು ಮೊದಲು ಜಲವನ್ನುಂಟುಮಾಡಿ ಅನಂತರ ಪಂಚಭೂತಗಳನ್ನೂ ಸೃಷ್ಟಿಮಾಡಿ ಆ ಮಹಾಭೂತಗಳನ್ನೆಲ್ಲ ಒಳಹೊಕ್ಕು ಅವುಗಳ ಸಂಯೋಗದಿಂದ ಮನುಷ್ಯರು ಗೋವುಗಳೇ ಮುಂತಾದ ಎರಡು ಕಾಲಿನ ಹಾಗೂ ನಾಲ್ಕು ಕಾಲಿನ ಜೀವರುಗಳನ್ನೆಲ್ಲ ಸೃಷ್ಟಿಮಾಡಿರುತ್ತದೆ. ಮುಂದುವರೆದು ಗಿಡ, ಮರ, ಸಸ್ಯಗಳನ್ನೂ- ಪಶ್ವಾದಿಗಳನ್ನೂ- ಎಲ್ಲಾ ಸ್ಥಾವರಜಂಗಮಪ್ರಾಣಿಶರೀರಗಳನ್ನೂ ಜೀವಾತ್ಮರೂಪದಿಂದ ಒಳಹೊಕ್ಕಿರುತ್ತದೆ. ಚೈತನ್ಯದಿಂದ ಸಕಲಬ್ರಹ್ಮಾಂಡವೂ ವ್ಯಾಪ್ತವಾಗಿದೆ- ಎಂದು ಭಾವ. ಬ್ರಹ್ಮಕ್ಕಿಂತ ಬೇರೊಂದು ಯಾವದೂ ಇಲ್ಲವೆಂದು ತಿಳಿಯಬೇಕು. ಅದನ್ನೇ ಈಗ ಮತ್ತೆ ದೃಢಪಡಿಸಲಾಗುವದು.

**ಅತಃ ಪರಂ ನಾನ್ಯದಣೀಯಸಗ್ಂ ಹಿ ಪರಾತ್ಪರಂ ಯನ್ಮಹತೋ ಮಹಾಂತಮ್ । ಯದೇಕಮವ್ಯಕ್ತಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ ॥೩॥**

ಹಿಂದಿನ ಮಂತ್ರದಲ್ಲಿ ಜಗತ್ಕಾರಣವಾಗಿ ಪರಾಮರ್ಶಿಸಿದ್ದ ತತ್ತ್ವವನ್ನು ಈಗ ಶುದ್ಧವಾಗಿ ವರ್ಣನೆಮಾಡಲಾಗುವದು. ಇದು ಪರಾತ್ಪರವು. ಪರನೆಂದರೆ ಹಿರಣ್ಯಗರ್ಭನು. ಅವನಿಗಿಂತಲೂ ಪರವು ಎಂದರೆ ಉತ್ಕೃಷ್ಟವೆಂದರ್ಥ. ಹಾಗೆಯೇ ಆಕಾಶವೇ ಮುಂತಾದ ಮಹತ್ಪದಾರ್ಥಗಳಿಗಿಂತಲೂ ಮಹತ್ತಾದುದು. ಇದಕ್ಕಿಂತ ಇನ್ನು ದೊಡ್ಡದೆಂಬುದಿಲ್ಲವೇ ಇಲ್ಲ. ಹಾಗೆಯೇ ಅಣುವಾದುದೂ ಇಲ್ಲ. ಸೂಕ್ಷ್ಮಕ್ಕಿಂತಲೂ ಇದು ಸೂಕ್ಷ್ಮತರವಾದುದಾಗಿದೆ. ಮತ್ತು ಇದೊಂದೇ ಇರುವದರಿಂದ **ಏಕವು**. ಇಂದ್ರಿಯಗೋಚರವಲ್ಲದ್ದರಿಂದ **ಅವ್ಯಕ್ತವು**. ದೇಶಕಾಲವಸ್ತುಪರಿಚ್ಛೇದಗಳಿಲ್ಲದ್ದಾದ್ದರಿಂದ **ಅನಂತವು**. ಜಗದಾತ್ಮವಾದ್ದರಿಂದ ಔಪಾಧಿಕವಾಗಿ **ವಿಶ್ವ**ವೆನಿಸುವದು. ಅನಾದಿಸಿದ್ಧವಾಗಿರುವದರಿಂದಲೂ ಎಷ್ಟು ಕಾಲವಾದರೂ ಹಳತಾಗುವದಿಲ್ಲವಾದ್ದರಿಂದಲೂ **ಪುರಾಣ**ವೆನಿಸಿರುವದು.

ಸ್ವಯಂಜ್ಯೋತಿಃಸ್ವಭಾವದ್ದಾದ್ದರಿಂದ ಕತ್ತಲೆಯಿಂದ ಆಚೆಗಿರುವದು. ಅಥವಾ ಬ್ರಹ್ಮದ ಸನ್ನಿಧಿಯು ತಿಳಿದುಬಂದಾಗ ಅಜ್ಞಾನವೆಂಬ ಕತ್ತಲೆಯಿರುವದೇ ಇಲ್ಲ- ಎಂದಭಿಪ್ರಾಯ.

**ತದೇವರ್ತಂ ತದು ಸತ್ಯಮಾಹುಸ್ತದೇವ ಬ್ರಹ್ಮ ಪರಮಂ ಕವೀನಾಮ್ । ಇಷ್ಟಾಪೂರ್ತಂ ಬಹುಧಾ ಜಾತಂ ಜಾಯಮಾನಂ ವಿಶ್ವಂ ಬಿಭರ್ತಿ ಭುವನಸ್ಯ ನಾಭಿಃ ।**
**ತದೇವಾಗ್ನಿಸ್ತದ್ವಾಯುಸ್ತತ್ಸೂರ್ಯಸ್ತದು ಚಂದ್ರಮಾಃ ।**
**ತದೇವ ಶುಕ್ರಮಮೃತಂ ತದ್ಬ್ರಹ್ಮ ತದಾಪಃ ಸ ಪ್ರಜಾಪತಿಃ ॥೬॥**

ಈ ಮಂತ್ರವೂ ಬ್ರಹ್ಮಸ್ವರೂಪಪ್ರತಿಪಾದಕವಾಗಿದೆ. ಮನಸ್ಸಿನಲ್ಲಿ ವಸ್ತುವಿಗೆ ಅನುಗುಣವಾಗಿ ಚಿಂತಿಸುವದನ್ನು ಋತವೆನ್ನುವರು. ಮಾತಿನಿಂದ ಅದನ್ನೇ ಹೇಳಿದರೆ ಸತ್ಯವೆನ್ನುವರು. ಬ್ರಹ್ಮವು ಈ ಎರಡೂ ತಾನೇ ಆಗಿರುವದು. ಹಾಗೆಯೇ ಅದು ಕವಿಗಳಿಗೆ ಎಂದರೆ ವೇದಶಾಸ್ತ್ರಪಾರಂಗತರಿಗೆ ಪ್ರಮಾಣಭೂತವಾದ ವೇದವೆನಿಸಿರುವದು. ಆದ್ದರಿಂದ ಅಗ್ನಿಹೋತ್ರದರ್ಶಪೂರ್ಣಮಾಸಾದಿ ಇಷ್ಟವೆಂಬ ಕರ್ಮಗಳೂ ಕೆರೆಬಾವಿಗಳ ನಿರ್ಮಾಣವೇ ಮುಂತಾದ ಪೂರ್ತವೆಂಬ ಕರ್ಮಗಳೂ ಬ್ರಹ್ಮವೇ ಎಂಬುದರಲ್ಲಿ ಸಂಶಯವಿಲ್ಲ. ಈ ಹಿಂದೆ ಹುಟ್ಟಿರುವ ಮತ್ತು ಇನ್ನು ಮುಂದೆ ಹುಟ್ಟಲಿರುವ ನಾನಾ ವಿಚಿತ್ರವಾದ ಪ್ರಪಂಚಕ್ಕೆಲ್ಲ ಈ ಬ್ರಹ್ಮವೇ ಕೇಂದ್ರವಾಗಿದ್ದುಕೊಂಡಿರುವದು. ಎಲ್ಲವನ್ನೂ ಧರಿಸಿರುವದು. ಅಗ್ನಿ, ವಾಯು, ಸೂರ್ಯ, ಚಂದ್ರನೇ- ಮುಂತಾದ ದೇವತೆಗಳೂ ಬ್ರಹ್ಮದ ವಿಭೂತಿಗಳೇ ಆಗಿರುವರು. ಆಕಾಶದಲ್ಲಿ ಹೊಳೆಯುತ್ತಿರುವ ಶುಕ್ರ(ಶುದ್ಧ)ವಾದ ನಕ್ಷತ್ರಾದಿಗಳು, ದೇವತೆಗಳಿಗೆ ಆಹಾರವೆನಿಸಿರುವ ಅಮೃತ, ದೇವತೆಗಳಲ್ಲಿ ಹಿರಿಯನಾದ ಹಿರಣ್ಯಗರ್ಭ, ಮತ್ತು ಆಪಃ- ಎಂದರೆ ಜಲವೇ ಮುಂತಾದ ಪಂಚಮಹಾಭೂತಗಳು, ಸ್ಥೂಲೋಪಾಧಿಯೆನಿಸಿರುವ ವಿರಾಟ್‌ಪ್ರಜಾಪತಿಯೇ ಮೊದಲಾದ ಎಲ್ಲಾ ಸೃಷ್ಟಿಯೂ ಬ್ರಹ್ಮವೇ- ಎಂದಭಿಪ್ರಾಯ. ಏನೇನು ಜಗತ್ತು ಕಂಡುಬರುತ್ತಿದೆಯೋ ಅದೆಲ್ಲವೂ ಅಖಂಡೈಕರಸವಾದ ಬ್ರಹ್ಮವೇ ಆಗಿದೆ. ಆದರೆ ಬ್ರಹ್ಮವಾಗಿದ್ದರೆ ಸಾಲದು. ಸಾಧಕನು ತನ್ನ ಪ್ರತ್ಯಗ್ದೃಷ್ಟಿಯಿಂದ ಅದನ್ನು ಎಲ್ಲೆಲ್ಲೂ ಯಾವಾಗಲೂ ಕಂಡುಕೊಳ್ಳಬೇಕು. ಹಾಗೆ ಕಂಡುಕೊಳ್ಳುವವರೆಗೂ ಅವಿದ್ಯಾದೃಷ್ಟಿಯಿಂದ ದ್ವೈತವೇ ಕಾಣುತ್ತಿರುವದು. ದ್ವೈತವಾದರೊ, ಪರಮಾರ್ಥವಲ್ಲ. 'ದ್ವೈತಮಿವ್ವಂತೆ ಕಂಡುಬರುವದೋ'- ಎಂದು ಶ್ರುತಿಯಲ್ಲಿಯೇ 'ಇವ' ಶಬ್ದದಿಂದ ಮಿಥ್ಯಾತ್ವವನ್ನು ಹೇಳಿದೆ. ಅನುಭವವೂ ಹಾಗೇ ಇದೆ. ಆದ್ದರಿಂದ ಬ್ರಹ್ಮವೊಂದೇ ಸತ್ಯವು- ಎಂದಾಯಿತು. ಅದೇ ಎಲ್ಲವೂ ಆಗಿದೆ- ಎಂಬುದು ಈ ಮಂತ್ರದ ಅಭಿಪ್ರಾಯವು.

# ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರುಶಾಖೆ,

**ನಂ. 68, ೨ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028**

( ಸಂಸ್ಥಾಪಕರು : ಪ. ಪ. ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು )

**1986ನೆಯ ಅಕ್ಟೋಬರ್ ಮಾಹೆಯಲ್ಲಿ ನಡೆಯುವ**

**ವಿಶೇಷ ಉಪನ್ಯಾಸಗಳು : ಶನಿವಾರ ಸಂಜೆ ಘಂ. 4 ರಿಂದ 5**
**ಭಾನುವಾರ ಸಂಜೆ ಘಂ. 5ರಿಂದ 6**

1. 4-10-86ನೆಯ ಶನಿವಾರ

ಪ್ರೊ. ಹೆಚ್.ಎಸ್. ವರದದೇಶಿಕಾಚಾರ್ಯರಂಗಪ್ರಿಯರು, M.A.,
**"ರಾಜರಾಜೇಶ್ವರೀ ಆರಾಧನೆ"**

2. 5-10-86ನೆಯ ಭಾನುವಾರ

ವಿದ್ವಾನ್ ಶಿವರಾಮ ಅಗ್ನಿಹೋತ್ರಿಗಳು M.A., **"ಶಾರದೋಪಾಸನೆ"**

3. 11-11-86ನೆಯ ಶನಿವಾರ

ಪ್ರೊ. ಬಿ. ಭೀಮಸೇನರಾವ್, M.Sc.,
**"ಲಲಿತಾ ತ್ರಿಪುರಸುಂದರೀ ಆರಾಧನೆ"**

4. 12-10-86ನೆಯ ಭಾನುವಾರ

ವಿದ್ಯಾಲಂಕಾರ ಪ್ರೊ. ಎಸ್.ಕೆ. ರಾಮಚಂದ್ರರಾವ್, M.A.,
**"ಶ್ರೀ ವಿದ್ಯೋಪಾಸನೆ"**

5. 18-10-1986ನೆಯ ಶನಿವಾರ

ವಿದ್ವಾನ್ ಎಂ.ಸಿ. ಭಟ್ಟಾಚಾರ್ಯರು **"ಹಿಂದೂಧರ್ಮ"**

6. 19-10-86ನೆಯ ಭಾನುವಾರ

ಡಾ॥ ಕೆ. ಶ್ರೀಕಂಠಯ್ಯ, B.Sc., M.B.B.S. ಕೊಳ್ಳೇಗಾಲ
**"ವಿಜ್ಞಾನವೂ ಅಧ್ಯಾತ್ಮವೂ"**

7. 25-10-86ನೆಯ ಶನಿವಾರ

ಶ್ರೀ ಲಲಿತಾ ವಿದ್ಯಾಮಂದಿರ, ತ್ಯಾಗರಾಜನಗರ **"ಯೋಗಾಸನಪ್ರದರ್ಶನ"**

8. 26-10-86ನೆಯ ಭಾನುವಾರ

ವೇದವಿದ್ಯಾಭೂಷಣ ಕೆ. ಜಿ ಸುಬ್ರಾಯಶರ್ಮಾ, M.A.,
**"ಸಾಂಖ್ಯವೇದಾಂತದರ್ಶನಗಳು"**

ವಿ. ಸೂ. ತಾ॥ 4-10-86ನೇ ಶನಿವಾರದಿಂದ 12-10-86ನೇ ಭಾನುವಾರದ ವರೆಗೆ ಶ್ರೀಮತ್ ಅಕ್ಷಯನಾಮಸಂವತ್ಸರದ ಶ್ರೀ ಶರನ್ನವರಾತ್ರಮಹೋತ್ಸವದ ಪ್ರಯುಕ್ತ ವಿಶೇಷಕಾರ್ಯಕ್ರಮಗಳು ನಡೆಯುತ್ತವೆ.

**ತಮಗೆಲ್ಲರಿಗೂ ಆದರದ ಸುಸ್ವಾಗತ.**

ಬೆಂಗಳೂರು-560028 **ಕೆ. ಜಿ. ಸುಬ್ರಾಯಶರ್ಮಾ,**
ತಾ॥ 1-10-1986. ಕಾರ್ಯದರ್ಶೀ.

ADHYATMA Prakasha

Regd. No.
KRNI-5

Registered with the Registrar of News-papers for India under No. R. N. 13244/57

# ಕೇಳಿರಿ

ಜ್ಞಾನದ ಹಂಗಿಲ್ಲದೆ ಮುಕ್ತಿಯನ್ನು ಪಡೆದುಕೊಳ್ಳೋಣವೆಂದು ಪ್ರಯತ್ನಿಸುವವರೆಲ್ಲರೂ ಎಂಥ ಪುಣ್ಯಕರ್ಮಗಳನ್ನೇ ಮಾಡಿರಲಿ, ಅದನ್ನು ಸಾಧಿಸಲಾಗದೆ ಹಿಂತಿರುಗುತ್ತಾರೆ. ಏಕೆಂದರೆ ಪುಣ್ಯವು ಕ್ಷಯವಾಗತಕ್ಕದ್ದು. ಆದ್ದರಿಂದ ಆತ್ಮಜ್ಞಾನವನ್ನು ಮುಮುಕ್ಷುವಾದ ಪ್ರತಿಯೊಬ್ಬನೂ ಸಂಪಾದಿಸಿಕೊಳ್ಳಲೇಬೇಕು. ಪುಣ್ಯಜಿತವಾದ ಲೋಕಗಳಲ್ಲಿ ಭೋಗಗಳಿದ್ದರೂ ಸ್ವಾತಂತ್ರ್ಯವಿರುವದಿಲ್ಲ. ಅಲ್ಲದೆ ಶೋಕಮೋಹಭಯಾದಿಗಳ ಕಾಟವೂ ಇರುತ್ತದೆ-ಎಂದು ಉಪನಿಷತ್ತು ತಿಳಿಸುತ್ತದೆ.

To.

Su




M.P.O. - 414

Sri.J.Srinivasa Murthy
No.18 - II Cross - Kodandaram-
puram,
P.O. - Bangalore - 3.

Edited Printed & Published by H. S. Lakshminarasimha Murthy
as Secretary for The Adhyatma Prakasha Karyalaya,
At The Adhyatma Prakasha Press, Holenarsipur - 573211
6—10—1986